# ತಮಟಕಲ್ಲು ಪರಿಸರ : ಚಾರಿತ್ರಿಕ ಅಧ್ಯಯನ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪ್ರೌಢಪ್ರಬಂಧ)

ಸಂಶೋಧಕರು
ನೋಂದಣಿ ಸಂಖ್ಯೆ. : ೧೮೦೧೦೮೦೩೦೦೧೮






ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೯

# ತಮಟಕಲ್ಲು ಪರಿಸರ : ಚಾರಿತ್ರಿಕ ಅಧ್ಯಯನ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಪ್ರೌಢಪ್ರಬಂಧ)

ಸಂಶೋಧಕರು

ನೋಂದಣಿ ಸಂಖ್ಯೆ : ೧೮೦೧೦೮೦೩೦೦೧೮



ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೧೯

# ಪರಿವಿಡಿ


ಪು.ಸಂ

ಅಧ್ಯಾಯ – ಒಂದು ೦೧–೦೫

ಪ್ರಸ್ತಾವನೆ

೧.೧. ಅಧ್ಯಯನ ಉದ್ದೇಶ, ವ್ಯಾಪ್ತಿ, ಸಮೀಕ್ಷೆ, ವಿಧಾನ ಮತ್ತು ಸ್ವರೂಪ

ಅಧ್ಯಾಯ – ಎರಡು ೦೬–೨೬

ಭೌಗೋಳಿಕ ಪರಿಸರ ಮತ್ತು ಚಾರಿತ್ರಿಕ ಹಿನ್ನೆಲೆ

೨.೧. ಸ್ಥಳನಾಮ

೨.೨. ಭೌಗೋಳಿಕ ಹಿನ್ನೆಲೆ

೨.೩. ಪ್ರಾಗಿತಿಹಾಸ ಮತ್ತು ಇತಿಹಾಸ

ಅಧ್ಯಾಯ – ಮೂರು ೨೭–೪೮

ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ

೩.೧. ದೇವಾಲಯಗಳು

೩.೨. ಮೂರ್ತಿಶಿಲ್ಪಗಳು

೩.೩. ಶಾಸನ ಮತ್ತು ಸ್ಮಾರಕಶಿಲ್ಪಗಳು

ಅಧ್ಯಾಯ – ನಾಲ್ಕು ೪೯–೬೫

ನಂಬಿಕೆ ಮತ್ತು ಆಚರಣೆಗಳು

೪.೧. ಐತಿಹ್ಯಗಳು

೪.೨. ಜಾತ್ರೆ – ಉತ್ಸವಗಳು

ಅಧ್ಯಾಯ - ಐದು ೬೬-೬೯
ಸಮಾರೋಪ

ಅನುಬಂಧಗಳು
೧. ಪರಾಮರ್ಶನ ಗ್ರಂಥಗಳು
೨. ವಕ್ತೃವಿವರ
೩. ತಲನಕ್ಷೆ
೪. ನಕ್ಷೆಗಳು
೫. ಛಾಯಾಚಿತ್ರಗಳು

# ಅಧ್ಯಾಯ – ಒಂದು
# ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಸಮೀಕ್ಷೆ, ವಿಧಾನ ಮತ್ತು ಸ್ವರೂಪ

## ಪ್ರಸ್ತಾವನೆ

ಇತಿಹಾಸವೆಂದರೆ ಗತಿಸಿ ಹೋದ ಘಟನೆಗಳನ್ನು ದೊರೆತ ದಾಖಲೆಗಳಿಂದ ಅವಲೋಕಿಸುವುದರ ಮೂಲಕ ಇತಿಹಾಸವನ್ನು ಪುನರ್‌ರಚಿಸುವುದಾಗಿದೆ. ಇತಿಹಾಸದ ಅಧ್ಯಯನದಿಂದ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ, ಕಲೆ, ವಾಸ್ತುಶಿಲ್ಪ ಹಾಗೂ ಇತರೆ ಸಾಂಸ್ಕೃತಿಕ ಅಂಶಗಳನ್ನು ತಿಳಿಯಬಹುದು. ಸಾಂಸ್ಕೃತಿಕವಾದ ಅಂಶಗಳೆಲ್ಲವೂ ಗತಿಸಿಹೋಗಿರುವಂತಹವು, ಇಂತಹ ವಿವರಗಳನ್ನು ಪ್ರತಿಬಿಂಬಿಸುವ ಚಾರಿತ್ರಿಕ ದಾಖಲೆಗಳು ಹಾಗೂ ಸ್ಮಾರಕಗಳು ವಾಸ್ತವ ಅಧ್ಯಯನಕ್ಕೆ ಆಕರಗಳಾಗಿವೆ. ಪ್ರಸ್ತುತ ಅಧ್ಯಯನವು ಸ್ಥಳೀಯ ಚರಿತ್ರೆಗೆ ಹೆಚ್ಚಿನ ಆದ್ಯತೆ ಕೊಡುವುದರ ಮೂಲಕ ಸೂಕ್ಷ್ಮ ಅಧ್ಯಯನದಿಂದ ಸಮಗ್ರತೆಯ ಸಾಂಸ್ಕೃತಿಕ ಅಂಶಗಳನ್ನು ತಿಳಿಯುವುದಾಗಿದೆ.

ಈ ಸ್ಥಳ ಐತಿಹಾಸಿಕ ವೈಶಿಷ್ಟ್ಯತೆಯನ್ನು ಹೊಂದಿದೆ. ಈ ಪ್ರದೇಶದಲ್ಲಿ ಕಂಡುಬರುವ ಐತಿಹಾಸಿಕ ಪ್ರಾಚ್ಯಾವಶೇಷಗಳು, ದೇವಾಲಯ, ಮೂರ್ತಿಶಿಲ್ಪ, ಸ್ಮಾರಕಗಳು, ಶಾಸನ, ಕೆರೆಗಳಿಂದ ಒಂದು ನೆಲೆಯ ಜನಜೀವನ ಅರಿಯಲು ಸಾಧ್ಯವಾಗುತ್ತದೆ. ಅಲ್ಲದೇ ಪ್ರಸ್ತುತ ತಮಟಕಲ್ಲು ಪ್ರದೇಶದ ಸ್ಥಳೀಯ ಐತಿಹಾಸಿಕ ಪ್ರಾಮುಖ್ಯತೆ ಹೊಂದಿದೆ. ಈ ಪ್ರದೇಶದಲ್ಲಿ ದೊರೆತ ಪ್ರಾಚ್ಯವಶೇಷಗಳನ್ನು ಅಧ್ಯಯನ ಮಾಡುವುದರಿಂದ ಪೂರ್ವಜರ ಜೀವನ ಪದ್ದತಿ, ರೀತಿ–

ನೀತಿ ಮೊದಲಾದ ಸಂಗತಿಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಅಲ್ಲದೇ ಈ ಪ್ರದೇಶದಲ್ಲಿ ನಡೆದಿರುವ ಸಂಶೋಧನೆಗಳು ವಿರಳವಾಗಿದ್ದು, ಪ್ರಸ್ತುತ ತಮಟಕಲ್ಲು ಗ್ರಾಮಕ್ಕೆ ಸ್ವತಃ ಕ್ಷೇತ್ರಕಾರ್ಯ ಕೈಗೊಂಡು ಅಲ್ಲಿ ದೊರಕಿರುವ ಪ್ರಾಚ್ಯವಶೇಷಗಳನ್ನು ವಿಶ್ಲೇಷಿಸಿ "ತಮಟಕಲ್ಲು ಪರಿಸರ: ಚಾರಿತ್ರಿಕ ಅಧ್ಯಯನ" ಎಂಬ ಶೀರ್ಷಿಕೆಯಡಿ ಅಧ್ಯಯನ ಮಾಡಲಾಗಿದೆ. ಸ್ಥಳೀಯ ಪರಿಸರವು ಚರಿತ್ರೆ ಅಧ್ಯಯನದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದೆ.

ಇತಿಹಾಸ ಶಾಸ್ತ್ರದ ಬೆಳವಣಿಗೆಯ ಪರಿಣಾಮವಾಗಿ ಇತಿಹಾಸಕಾರರಿಂದ ಕಡೆಗಣಿಸಲ್ಪಟ್ಟ ಸ್ಥಳೀಯ ಇತಿಹಾಸಕ್ಕೆ ಹೆಚ್ಚಿನ ಮಹತ್ವ ದೊರೆತಿದೆ. ಸ್ಥಳೀಯ ಇತಿಹಾಸ ತನ್ನದೇ ಆದ ಭೌಗೋಳಿಕ ಮಿತಿಗೊಳಪಟ್ಟರೂ ಸ್ಥಳೀಯ ಸಮುದಾಯಗಳ ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಸಂಗತಿಗಳನ್ನು ವಿವರವಾಗಿ ಸಂಗ್ರಹಿಸಿಕೊಡುವ ವಿಪುಲ ಅವಕಾಶ ಅದಕ್ಕಿದೆ. ಆದ್ದರಿಂದ ಸ್ಥಳೀಯ ಇತಿಹಾಸ ಅಧ್ಯಯನದಿಂದ ವಿಸ್ತೃತವಾದ ಸಾಂಸ್ಕೃತಿಕ ಅಂಶಗಳನ್ನು ಅರಿಯಲು ಸಹಾಯಕವಾಗುತ್ತದೆ.

ಪ್ರಸ್ತುತ ಆಯ್ದುಕೊಂಡಿರುವ ವಿಷಯದ ಪರಿಸರದಲ್ಲಿನ ದೇವಾಲಯ, ಸ್ಮಾರಕಶಿಲ್ಪ, ಶಾಸನಗಳನ್ನು ಅವಲೋಕಿಸುವುದರ ಮೂಲಕ ಆ ಪ್ರದೇಶದ ಸಾಂಸ್ಕೃತಿಕ ಇತಿಹಾಸವನ್ನು ಅರಿಯುವುದರ ಜೊತೆಗೆ ದೇವಾಲಯ ಕಲೆ ಮತ್ತು ಅದರ ವಾಸ್ತು ಶೈಲಿಯನ್ನು ತಿಳಿಸಿಕೊಡುವುದು ಈ ಪ್ರೌಢಪ್ರಬಂಧದ ಪ್ರಮುಖ ಧ್ಯೇಯವಾಗಿದೆ.

## ೧.೧ ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನದ ಉದ್ದೇಶ ಈ ಪರಿಸರದ ಒಟ್ಟಾರೆ ಚಾರಿತ್ರಿಕ ವಿಷಯಗಳನ್ನು ಕಟ್ಟಿಕೊಡುವ ಹಾಗೂ ಲಭ್ಯವಿರುವ ಆಕರಗಳ ಹಿನ್ನಲೆಯಲ್ಲಿ ವಿಶ್ಲೇಷಿಸುವುದಾಗಿದೆ. ಈ ಅಂಶಕ್ಕೆ ಸಂಬಂಧಿಸಿದಂತೆ ದೊರೆತಿರುವ ಪುರಾತತ್ವ ಆಕರಗಳನ್ನು ಸಂಗ್ರಹಿಸಿ ಹಾಗೂ ವಿಶ್ಲೇಷಣೆ ಮೂಲಕ ಸ್ಥಳೀಯ ಇತಿಹಾಸವನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಈ ಪ್ರದೇಶದಲ್ಲಿ ಇದುವರೆಗೂ ದೊರೆತಿರುವ ಪ್ರಾಚ್ಯವಶೇಷಗಳ ಅಧ್ಯಯನದ ಜೊತೆಗೆ ಕ್ಷೇತ್ರಕಾರ್ಯವನ್ನು ಕೈಗೊಂಡು ಸಂದರ್ಶನಗಳ ಮೂಲಕ ಪ್ರಚಲಿತವಾಗಿರುವ ಐತಿಹ್ಯ ಹಾಗೂ ಮೌಖಿಕ ಆಕರಗಳನ್ನು ದಾಖಲಿಸಿಕೊಡುವುದಾಗಿದೆ. ಅಲ್ಲದೆ ಸಂಗ್ರಹಿತ ಸಂಪನ್ಮೂಲ ಆಕರಗಳನ್ನು ವಿಶ್ಲೇಷಣೆ ಮಾಡುವುದರ ಮೂಲಕ ಸಮಗ್ರ ಇತಿಹಾಸವನ್ನು ಕಟ್ಟಿಕೊಡುವ ಪ್ರಯತ್ನವನ್ನು ಪ್ರಸ್ತುತ ಈ ಪ್ರೌಢಪ್ರಬಂಧದಲ್ಲಿ ಮಾಡಲಾಗಿದೆ.

## ೧.೨ ಅಧ್ಯಯನದ ವ್ಯಾಪ್ತಿ

ಯಾವುದೇ ಸಂಶೋಧನೆಗೆ ಅಧ್ಯಯನದ ವ್ಯಾಪ್ತಿ ಬಹುಮುಖ್ಯ, ನಿರ್ದಿಷ್ಟ ಹಾಗೂ ಉದ್ದೇಶಪೂರಿತವಾದ ಸಂಶೋಧನೆಯ ಯಶಸ್ಸಿಗೆ ಇದು ತುಂಬಾ ಸಹಾಯಕವಾಗಿರುತ್ತದೆ.

ಹಾಗಾಗಿ ಪ್ರಸ್ತುತ ತಮಟಕಲ್ಲು ಪರಿಸರದ ಚಾರಿತ್ರಿಕ ಅಧ್ಯಯನದ ವ್ಯಾಪ್ತಿಯನ್ನು ಕಾಲಾವಧಿಯ ದೃಷ್ಟಿಯಿಂದ ನಿರ್ದಿಷ್ಟಪಡಿಸಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದ ಶೀರ್ಷಿಕೆ ಸೂಚಿಸುವಂತೆ ತಮಟಕಲ್ಲು ಸೀಮಿತ ಪ್ರದೇಶವನ್ನು ಮಾತ್ರ ಅಧ್ಯಯನಕ್ಕೆ ಹೆಚ್ಚು ಬಳಸಿಕೊಳ್ಳಲಾಗಿದೆ. ಕಾಲದ ದೃಷ್ಟಿಯಿಂದ ಪ್ರಾಗಿತಿಹಾಸ ಕಾಲದಿಂದ ಇಂದಿನ ಕಾಲದವರೆಗಿನ ಪ್ರಸ್ತುತ ಅಂಶಗಳನ್ನು ಒಳಗೊಂಡಂತೆ ಅಧ್ಯಯನದ ವ್ಯಾಪ್ತಿಯನ್ನು ಸೀಮಿತಗೊಳಿಸಲಾಗಿದೆ.

## ೧.೩. ಅಧ್ಯಯನ ಸಮೀಕ್ಷೆ

ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ತಮಟಕಲ್ಲು ಪರಿಸರಕ್ಕೆ ಸಂಬಂಧಿಸಿದಂತೆ ಅಲ್ಲಿನ ಚರಿತ್ರೆ ಮತ್ತು ಪ್ರಾಚೀನ ದೇವಾಲಯ, ಮೂರ್ತಿಶಿಲ್ಪ, ವೀರಗಲ್ಲು ಹಾಗೂ ಶಾಸನಗಳನ್ನು ಕುರಿತಂತೆ ಕಿರು ಪರಿಚಯವನ್ನು ಮಾಡಿಕೊಡುವ ಬಿಡಿ ಲೇಖನಗಳು ಪ್ರಕಟಗೊಂಡಿರುವುದನ್ನು ಗಮನಿಸಬಹುದು. ಎಸ್.ವೈ.ಸೋಮಶೇಖರ್ ಅವರ ಕರ್ನಾಟಕ ದೇವಾಲಯ ಕೋಶ: ಚಿತ್ರದುರ್ಗ ಜಿಲ್ಲೆ ಎಂಬ ಪುಸ್ತಕವು ತಮಟಕಲ್ಲು ಬಗ್ಗೆ ಪ್ರಾಥಮಿಕ ಮಾಹಿತಿಯನ್ನು ನೀಡುತ್ತದೆ. ಹಾಗೂ ಡಿ.ಟಿ. ರಂಗಸ್ವಾಮಿಯವರ ಚಿತ್ರದುರ್ಗ ದೇವಾಲಯ ದರ್ಶಿನಿ ಎಂಬ ಪುಸ್ತಕದಲ್ಲಿ ತಮಟಕಲ್ಲು ಪ್ರದೇಶದ ಬಗ್ಗೆ ತಿಳಿಯಲು ಸಹಾಯಕವಾಗಿದೆ. ಡಿ.ಬಿ. ನಾಯಕರವರ ಕರ್ನಾಟಕ ಗ್ರಾಮ ಚರಿತ್ರೆ ಕೋಶ ಎಂಬ ಪುಸ್ತಕದಲ್ಲಿ ತಮಟಕಲ್ಲು ಪ್ರದೇಶದ ಭೌಗೋಳಿಕ ಪರಿಸರದ ಬಗ್ಗೆ ತಿಳಿಯಲು ಸಹಾಯಕವಾಗಿದೆ. ಹಾಗೂ ಆರ್. ಗೋಪಾಲ್ ರವರ ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಎಂಬ ಪುಸ್ತಕದಲ್ಲಿ ತಮಟಕಲ್ಲು ಪ್ರದೇಶದ ಪ್ರಾಗೈತಿಹಾಸದ ನೆಲೆಯ ಬಗ್ಗೆ ಮಾಹಿತಿ ದೊರೆತಿದೆ. ಹಾಗೂ ಇತಿಹಾಸ ದರ್ಶನ ಸಂಪುಟ – ೩೩ ತಮಟಕಲ್ಲು ಚಿತ್ರದುರ್ಗ ಪರಿಸರದ ಪ್ರಾಗೈತಿಹಾಸ ನೆಲೆ ಎಂಬುದಾಗಿ ಲಕ್ಷ್ಮಣ್‌ತೆಲಗಾವಿ ಯವರು ಲೇಖನ ಪ್ರಕಟಿಸಿದ್ದಾರೆ. ಈ ಎಲ್ಲಾ ಅಧ್ಯಯನಗಳು ಬಿಡಿಯಾಗಿರುವ ತಮಟಕಲ್ಲು ಪರಿಸರದ ಚಾರಿತ್ರಿಕ ಅಧ್ಯಯನ ಎಂಬ ಪ್ರೌಢಪ್ರಬಂಧವನ್ನು ಇತಿಹಾಸ ಮತ್ತು ಪುರಾತತ್ವ ಅಧ್ಯಯನದ ಹಿನ್ನೆಲೆಯಲ್ಲಿ ಸವಿಸ್ತಾರವಾಗಿ ಕಟ್ಟುವ ಉದ್ದೇಶವನ್ನು ಹೊಂದಿದೆ.

## ೧.೪ ಅಧ್ಯಯನ ವಿಧಾನ

ಪ್ರಸ್ತುತ ಅಧ್ಯಯನದಲ್ಲಿ ಕ್ಷೇತ್ರಕಾರ್ಯ ವಿಧಾನವನ್ನು ಬಳಸಿಕೊಳ್ಳಲಾಗಿದೆ. ತಮಟಕಲ್ಲು ಪ್ರದೇಶಕ್ಕೆ ನೇರವಾಗಿ ಭೇಟಿಮಾಡಿ ಅಲ್ಲಿ ದೊರೆತಿರುವ ಐತಿಹಾಸಿಕ ಅಥವಾ ಪ್ರಾಚ್ಯವಶೇಷಗಳನ್ನು ಕ್ರೋಢೀಕರಿಸಿ ದಾಖಲಿಸಿಕೊಳ್ಳುವುದರ ಮೂಲಕ ಮೌಖಿಕ ಕಥನ ಹಾಗೂ ಐತಿಹ್ಯಗಳನ್ನು ತಿಳಿದಿರುವಂತಹ ವ್ಯಕ್ತಿಗಳೊಂದಿಗೆ ಚರ್ಚಿಸಿ ವಿಷಯವನ್ನು ಸಂಗ್ರಹಿಸಲಾಗಿದೆ. ಅಧ್ಯಯನಕ್ಕೆ ಪೂರಕವಾಗಿ ದೊರೆತಿರುವ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಪ್ರಚಲಿತದಲ್ಲಿರುವ ಇತಿಹಾಸ ಮತ್ತು ಸಾಂಸ್ಕೃತಿಕವಾಗಿ ದೊರೆತಿರುವ

ಆಕರಗಳನ್ನು ವಿಷಯಾನುಸಾರ ವಿಶ್ಲೇಷಿಸಿ ಚರ್ಚಿಸಿ ಫಲಿತಗಳನ್ನು ಕಂಡುಕೊಳ್ಳಲಾಗಿದೆ. ವಸ್ತುನಿಷ್ಠವಾದ ವಿಧಾನಗಳನ್ನು ಪ್ರೌಢಪ್ರಬಂಧರಚನೆಯಲ್ಲಿ ಪ್ರಾಮಾಣಿಕವಾಗಿ ಬಳಸಿಕೊಳ್ಳಲು ಪ್ರಯತ್ನಿಸಲಾಗಿದೆ. ಅಧ್ಯಯನದ ಕೊನೆಯಲ್ಲಿ ಗ್ರಂಥಋಣ, ನಕ್ಷೆ, ಛಾಯಾ ಚಿತ್ರಗಳ ವಿವರಗಳನ್ನು ನೀಡಲಾಗಿದೆ.

### ೧.೫ ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನದ ಉದ್ದೇಶ ವ್ಯಾಪ್ತಿಯ ಅಂಶಗಳ ಹಿನ್ನಲೆಯಲ್ಲಿ ಈ ಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಐದು ಅಧ್ಯಾಯಗಳಾಗಿ ವಿಭಾಗಿಸಲಾಗಿದೆ.

ಮೊದಲನೇ ಅಧ್ಯಾಯದಲ್ಲಿ ಪ್ರಸ್ತಾವನೆ, ಉದ್ದೇಶ, ವ್ಯಾಪ್ತಿ, ಸ್ವರೂಪ, ಇದುವರೆಗಿನ ಅಧ್ಯಯನ ಸಮೀಕ್ಷೆ ಹಾಗೂ ಅಧ್ಯಯನದ ವಿಧಾನವನ್ನು ಸ್ಪಷ್ಟಪಡಿಸಲಾಗಿದೆ.

ಎರಡನೇ ಅಧ್ಯಾಯವು ತಮಟಕಲ್ಲು ಪರಿಸರದ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ ಅಂಶಗಳನ್ನು ಕುರಿತಿದೆ.

ಮೂರನೇ ಅಧ್ಯಾಯವು ಈ ಪರಿಸರದಲ್ಲಿ ಕಂಡುಬರುವ ದೇವಾಲಯ, ಮೂರ್ತಿಶಿಲ್ಪ, ವೀರಗಲ್ಲು, ಮುಂತಾದ ಅಂಶಗಳನ್ನು ಒಳಗೊಂಡಿದೆ.

ನಾಲ್ಕನೇ ಅಧ್ಯಾಯವು ಈ ಪರಿಸರದ ಸಾಂಸ್ಕೃತಿಕ ಮತ್ತು ಧಾರ್ಮಿಕ ನಂಬಿಕೆ ಆಚರಣೆಗಳನ್ನು ಒಳಗೊಂಡಿದೆ.

ಐದನೆಯ ಅಧ್ಯಾಯವು ಸಮಾರೋಪವಾಗಿದ್ದು ಇದು ಒಟ್ಟಾರೆ ಸಂಶೋಧನೆಯ ಸಂಕ್ಷಿಪ್ತ ರೂಪವಾಗಿದೆ.

# ಅಧ್ಯಾಯ – ಎರಡು
# ಭೌಗೋಳಿಕ ಪರಿಸರ ಮತ್ತು ಚಾರಿತ್ರಿಕ ಹಿನ್ನೆಲೆ

## ೨.೧ ಸ್ಥಳನಾಮ

ತಮಟಕಲ್ಲು ಗ್ರಾಮವು ಪ್ರಾಚೀನ ಕಾಲದಲ್ಲಿ ಮಸಿಕಾಪುರ ಎನ್ನುವ ಪಟ್ಟಣವಾಗಿತ್ತು. ನಂತರದ ಕಾಲದಲ್ಲಿ ತಮಂಡೇಕಲ್ಲು ತಮಟಕಲ್ಲು ಎಂಬುದು ಕಾಲಕ್ರಮೇಣ ತಮಟಕಲ್ಲು ಆಯಿತೆಂದು ತಿಳಿದುಬರುತ್ತದೆ.[೧]

ತಮಟಕಲ್ಲಿನಲ್ಲಿ ದೊರೆತಿರುವ ಕ್ರಿ.ಶ.೫೦೦ರ ಶಾಸನದಲ್ಲಿ ಮಾಸಿಕಪುರದ ಅಧಿಪತಿಯಾದ ಧನಾಗಮ ಇವನ ಮಗ ಗುಣಮಧುರನೆಂಬ ಬ್ರಾಹ್ಮಣನ ಗುಣಗಳನ್ನು ಹೊಗಳಲಾಗಿದೆ. ಇದರಲ್ಲಿ ಗುಣಮಧುರನು ಯುದ್ಧದಲ್ಲಿ ಸತ್ತನಂತರ ಅವನನ್ನು ಪ್ರಶಂಸಿಸಿ ಬರೆಯಲಾಗಿದೆ. ಈ ಪ್ರದೇಶವೇ ಮಾಸಿಕಪುರ ಆಗಿರಬಹುದೆಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ.[೨]

ತಮಟಕಲ್ಲು ಎಂಬುದು ತಾಮ್ರಲೋಹ ಸಂಬಂಧಿತ (ತಾಮ್ರಿಕ)ಎಡೆ. ಇದು ತಾಮ್ರ ತಯಾರಿಕೆಯ ಕೇಂದ್ರವಾಗಿತೆನ್ನಲಾಗಿದೆ. ನಮ್ಮ ಪುರಾತನರು ಬಳಸಿಕೊಳ್ಳಲಾರಂಭಿಸಿದ ಲೋಹಗಳಲ್ಲಿ ತಾಮ್ರವೇ ಮೊದಲನೆಯದೆಂಬುದು ಗಮನಾರ್ಹ. ಇಂದಿನ ತಮಟಕಲ್ಲು 'ತಮಂಡಿಯಕಲ್ಲು' ಎಂದು ಈ ಬಂಡೆ ಬರಹದಲ್ಲಿ ಉಲ್ಲೇಖಿಸಿರುವುದು ಗಮನಾರ್ಹ. 'ತಮಂಡಿ' ಎಂಬುದು 'ತಮ್ಮಡಿಯ' ಆಡುರೂಪ. ತಮ್ಮಡಿ ಎಂದರೆ ತಾಮ್ರಲೋಹ. ತಂಬಟವೆಂದರೆ ತಾಮ್ರ; ತಂಬಟಿಗನೆಂದರೆ ತಾಮ್ರದ ಕೆಲಸ ಮಾಡುವವನು. ತಮಟಕಲ್ಲು ಸ್ಥಳನಾಮದ ಹಿನ್ನೆಲೆಯಲ್ಲಿ ತಾಮ್ರಲೋಹ ಉತ್ಪಾದನೆಯ ಬಳಕೆಯ ಲಕ್ಷಣವಿರುವುದು ಸ್ಪಷ್ಟ.[೩] ಅಲ್ಲದೇ ಇದೇ ಪರಿಸರದಲ್ಲಿ ಇಂಗಳದಾಳ್ ಇದ್ದು, ಇದು ಪ್ರಾಚೀನ ಕಾಲದಿಂದ ಇಂದಿನವರೆಗೆ ತಾಮ್ರದ ಪ್ರಮುಖ ಗಣಿಯಾಗಿದ್ದುದು ದೃಢವಾಗುತ್ತದೆ.

ತಮಟಕಲ್ಲು ಎಂಬುದು ತಾಮ್ರದ ತಯಾರಿಕಾ ನೆಲೆಯೆಂದು ಗುರುತಿಸುವುದು ಒಂದೆಡೆಯಾದರೆ ಈ ಪರಿಸರವು ಬೃಹತ್ ಶಿಲಾಯುಗದ ಬಹುದೊಡ್ಡ ನೆಲೆಯೂ ಆಗಿದೆ. ಕಲ್ಲು ಎಂಬುದು ಸಮಾಧಿಗೆ ಬಳಸಲಾದ ಶಿಲೆಯಾಗಿಯೂ ನಾಡಿನ ಅನೇಕ ಕಡೆ ಸ್ಥಳನಾಮಗಳಲ್ಲಿ ಬಳಕೆಗೊಂಡಿದೆ. ಉದಾ: ಆಯಕಲ್ಲು, ಹಿರೇಬೆಣಕಲ್ಲು, ಕೊಡೆಕಲ್ಲು ಇತ್ಯಾದಿ. ಇದರಿಂದ ಬೃಹತ್‌ಶಿಲಾಯುಗ ಕಾಲ ಹಾಗೂ ಅಂದಿನ ಸಮಾಧಿಗಳಿರುವ ನೆಲೆಯಾಗಿರುವುದರಿಂದ ಅಲ್ಲದೇ ಸಮಾಧಿಯ ಮೇಲಿನ ಕಲ್ಲು ಸಾಮಾನ್ಯವಾಗಿ ತಮಟೆ ಆಕಾರದಲ್ಲಿರುವುದರಿಂದ 'ತಮಟೆಕಲ್ಲು' ಎಂಬ ಸ್ಥಳನಾಮ ಬಂದಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

## ೨.೨ ಭೌಗೋಳಿಕ ಹಿನ್ನೆಲೆ

ತಮಟಕಲ್ಲು ಚಿತ್ರದುರ್ಗ ತಾಲ್ಲೂಕು ಕೇಂದ್ರದಿಂದ ವಾಯವ್ಯ ದಿಕ್ಕಿಗೆ ೬ ಕಿಲೋ ಮೀಟರ್ ದೂರದಲ್ಲಿದೆ. ತಮಟಕಲ್ಲು  ಬೆಟ್ಟಗುಡ್ಡಗಳಿಂದ ಕೂಡಿದ ಪ್ರದೇಶವಾಗಿದ್ದು ಇಲ್ಲಿ ಯಾವುದೇ ನದಿ ಹರಿಯುವುದಿಲ್ಲ. ಇಲ್ಲಿ ಬಹುತೇಕ ಜನರು ಮಳೆಯನ್ನೇ ಅವಲಂಬಿಸಿ ಬೆಳೆಗಳನ್ನು ಬೆಳೆಯುವವರು ಹೆಚ್ಚಿದ್ದಾರೆ. ಇದು ಗುಡ್ಡದರಂಗವ್ವನಹಳ್ಳಿ ಗ್ರಾಮ ಪಂಚಾಯ್ತಿ ವ್ಯಾಪ್ತಿಗೊಳಪಟ್ಟ ಜನವಸತಿ ಮತ್ತು ಕಂದಾಯ ಗ್ರಾಮ. ೨೦೧೧ ರ ಜನಗಣತಿಯ ಪ್ರಕಾರ ೧೬೭೮ ಜನಸಂಖ್ಯೆ ಗ್ರಾಮ ಒಳಗೊಂಡಿದೆ.[೪]

ಭೌಗೋಳಿಕ ವಿಸ್ತೀರ್ಣ – ೧೧೩೦.೯ ಹೆಕ್ಟೇರ್ ಹೊಂದಿದ್ದು, ಭೂಪ್ರದೇಶವು ಸಮುದ್ರ ಮಟ್ಟದಿಂದ ಸುಮಾರು ೬೦೦ ರಿಂದ ೯೦೦ ಮೀಟರ್‌ಗಳಷ್ಟು ಎತ್ತರದಲ್ಲಿದ್ದು,  ಉತ್ತರ ಅಕ್ಷಾಂಶ ೧೪೦.೧೬೧ ಮತ್ತು  ಪೂರ್ವ ರೇಖಾಂಶ ೭೬೦.೨೨೧ ಹೊಂದಿದ್ದು, ಉತ್ತಮ ಹವಮಾನವನ್ನು ಹೊಂದಿದೆ. ದಕ್ಷಿಣ ದಿಕ್ಕಿಗೆ ಹೆಡೇಕಲ್ಲು ಬೆಟ್ಟವಿದೆ. ೭.೭೦ ಹೆಕ್ಟೇರ್ ಭೂಪ್ರದೇಶದಲ್ಲಿ ಈ ಬೆಟ್ಟವು ವಿಸ್ತರಿಸಿಕೊಂಡಿದೆ.

ತಮಟಕಲ್ಲು ಭೂ ಪರಿಸರವು ಮರಳು ಮಿಶ್ರಿತ ಕೆಂಪುಮಣ್ಣಿನಿಂದ ಕೂಡಿದೆ. ಬೆಣಚುಕಲ್ಲು ಬಂಡೆಗಳ ಲಕ್ಷಣವಿದ್ದು ೪೫.೨೮ ಹೆಕ್ಟೇರ್ ಅರಣ್ಯ ಪ್ರದೇಶವನ್ನು ಹೊಂದಿದೆ.  ಮೂರು ಬಾವಿಗಳನ್ನು ಹೊಂದಿದೆ. ಅದರಲ್ಲಿ ಕೆಲವು ಮುಚ್ಚಿಹೋಗಿವೆ ತುಂಬಾ ಬಾವಿ ಅಥವಾ ದೇವರ ಬಾವಿ ಪ್ರಸ್ತುತವಾಗಿ ಇದೆ ಇದು ಪ್ರಾಚೀನ ಕಾಲದ ಬಾವಿಯಾಗಿದೆ. ಗ್ರಾಮದ ದೇವತೆಗಳನ್ನು ಹಬ್ಬ ಹರಿದಿನದಂದು ಗಂಗೆ ಪೂಜೆಗೆ ಈ ಬಾವಿಗೆ ಕರೆತರಲಾಗುತ್ತದೆ. ಕೃಷಿ ಪ್ರಮುಖ ಕಸುಬು. ಈರುಳ್ಳಿ, ಸೂರ್ಯಕಾಂತಿ, ಮೆಕ್ಕೆಜೋಳ, ರಾಗಿ, ಹತ್ತಿ, ಶೇಂಗಾ, ಎಳ್ಳು ಇಲ್ಲಿನ ಮುಖ್ಯ ಬೆಳೆಗಳು. ನಾಯಕ ಸಮುದಾಯ, ಲಿಂಗಾಯಿತ ಸಮುದಾಯ, ಆದಿ ಕರ್ನಾಟಕ ಮತ್ತು ಆದಿ ದ್ರಾವಿಡ ಹಾಗೂ ಕುಂಬಾರರ ಸಮುದಾಯಗಳು  ಕಂಡುಬರುತ್ತವೆ.[೫]

### ಬೆಟ್ಟಗಳು

ಮಾನವನು ಪ್ರಾಗಿತಿಹಾಸದ ಕಾಲದಲ್ಲಿ ಹಂತಹಂತವಾಗಿ ಪ್ರಗತಿಯ ಸಂಸ್ಕೃತಿಯನ್ನು ಹೊಂದುತ್ತಾ ತನ್ನ ಜೀವನಕ್ರಮವನ್ನು ಸುಧಾರಿಸಿಕೊಂಡನು. ಅಲೆಮಾರಿ ಜೀವನವನ್ನು ಬಿಟ್ಟು ಒಂದೊಡೆ ನೆಲೆನಿಂತು ವಾಸ ಮಾಡಲು ಆರಂಭ ಮಾಡಿದನು. ನೆಲೆ ಸ್ವರೂಪವನ್ನು ಪಡೆದಿದ್ದು ದೊಡ್ಡದಾದ ಬೆಟ್ಟ, ಕಲ್ಲಿನ ಗುಹೆಗಳು, ಮರದ ಪೊಟರೆಗಳನ್ನು ಆಶ್ರಯಿಸಿದನು. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಬೆಟ್ಟಗುಡ್ಡಗಳಿಂದ ಕೂಡಿದ ಪರಿಸರವನ್ನು ಕಾಣುತ್ತೇವೆ. ಪ್ರಾಗಿತಿಹಾಸ ಕಾಲದ ದೃಷ್ಟಿಯಿಂದ ಈ ಪರಿಸರದಲ್ಲಿ ಕಂಡುಬರುವ ಬೆಟ್ಟಗುಡ್ಡಗಳು ಆದಿ ಮಾನವನ ವಸತಿ ನೆಲೆಯಾಗಿ ಪ್ರಾಮುಖ್ಯತೆಯನ್ನು ಪಡೆದಿವೆ.

ಈ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ನವಶಿಲಾಯುಗ ಮತ್ತು ಬೃಹತ್ ಶಿಲಾಯುಗದ ಸಂಸ್ಕೃತಿಯನ್ನು ತಿಳಿಯಲು ಬೆಟ್ಟದ ಕಣಿವೆಗಳು ಸಹಾಯಕವಾಗಿವೆ.

### ೨.೩ ಪ್ರಾಗಿತಿಹಾಸ

ಮಾನವನ ಇತಿಹಾಸವನ್ನು ಪ್ರಮುಖವಾಗಿ ಎರಡು ಮುಖ್ಯ ವಿಭಾಗಗಳನ್ನಾಗಿ ಮಾಡಲಾಗಿದೆ. ಮೊದಲನೆಯದು ಅಕ್ಷರ ಜ್ಞಾನವಿಲ್ಲದ ಹಂತ ಅಥವಾ ಪ್ರಾಗಿತಿಹಾಸ ಅಥವಾ ಪೂರ್ವ ಇತಿಹಾಸ ಎರಡನೆಯದು ಅಕ್ಷರ ಜ್ಞಾನವಿರುವ ಹಂತ ಅಥವಾ ರಾಜ ಮಹಾರಾಜರ ಕಾಲ ಅಥವಾ ಇತಿಹಾಸ ಕಾಲವೆಂದೂ ಹೇಳಬಹುದು. ಇವುಗಳಲ್ಲಿ ಪ್ರಾಗಿತಿಹಾಸದ ಕಾಲಮಾನ ಸುದೀರ್ಘವಾದುದಾಗಿದೆ. ಸುಮಾರು ಐದುಲಕ್ಷ ವರ್ಷಗಳಿಂದ ಕ್ರಿ.ಶಕದ ಆರಂಭದವರೆಗೂ ಅದು ರೂಢಿಯಲ್ಲಿದ್ದಿತೆಂದು ತಿಳಿಯುತ್ತದೆ.[೬]

ಈ ಕಾಲಮಾನವನ್ನು ಆಗ ನಿತ್ಯ ಬಳಕೆಯಲ್ಲಿದ್ದ ವಸ್ತುಗಳ ಆಧಾರದಿಂದ ಶಿಲಾಯುಗ ಸಂಸ್ಕೃತಿ ಮತ್ತು ಲೋಹಯುಗ ಸಂಸ್ಕೃತಿ ಎಂದು ಭಾಗಗಳನ್ನು ಮಾಡಲಾಗಿದೆ.

ಶಿಲಾಯುಗ ಸಂಸ್ಕೃತಿಯ ಹಂತವನ್ನು ಅವಶೇಷ ಹಾಗೂ ಅವುಗಳ ಬೆಳವಣಿಗೆ ಮತ್ತು ಕುಶಲತೆಯನ್ನುನಸರಿಸಿ ಹಳೆಯ ಶಿಲಾಯುಗ ಸಂಸ್ಕೃತಿ, ಸೂಕ್ಷ್ಮ ಶಿಲಾಯುಗ ಸಂಸ್ಕೃತಿ ಮತ್ತು ನೂತನ ಶಿಲಾಯುಗ ಸಂಸ್ಕೃತಿ ಎಂದು ವರ್ಗೀಕರಿಸಲಾಗಿದೆ. ಅಧ್ಯಯನ ತೀವ್ರತೆ ಹಾಗೂ ಪ್ರತಿಯೊಂದು ಹಂತಗಳಲ್ಲಾದ ಬದಲಾವಣೆಗಳನ್ನು ಗುರುತಿಸಿ, ಹೊಸ ಹೊಸ ವಿಷಯಗಳ ಬಗೆಗೆ ತಿಳಿಯಲು ಸಾಧ್ಯವಾಗಿದೆ. ಹಾಗಯೇ ಹಳೆಯ ಶಿಲಾಯುಗವನ್ನು ಮೂರು ಉಪಗುಂಪುಗಳಾಗಿ ವಿಭಾಗಿಸಿ, ಆದಿ ಹಳೆಯ ಶಿಲಾಯುಗ ಸಂಸ್ಕೃತಿ, ಮಧ್ಯ ಹಳೆಶಿಲಾಯುಗ ಸಂಸ್ಕೃತಿ ಮತ್ತು ಅಂತ್ಯ ಹಳೆಯ ಶಿಲಾಯುಗ ಸಂಸ್ಕೃತಿ ಎಂದು ವಿಭಾಗಿಸಲಾಗಿದೆ.

ಲೋಹಯುಗ ಸಂಸ್ಕೃತಿಯ ಆರಂಭದಲ್ಲಿ ಶಿಲೆಯ ಬಳಕೆಯ ಜೊತೆಗೆ ತಾಮ್ರದ ಬಳಕೆಯೂ ಇದ್ದುದು ತಿಳಿಯುತ್ತದೆ. ಹಾಗೂ ಮೊದಲ ಹಂತವನ್ನು ಶಿಲಾ-ತಾಮ್ರಯುಗ ಸಂಸ್ಕೃತಿ ಎಂದು, ನಂತರದ ಹಂತದಲ್ಲಿ ಕಬ್ಬಿಣವನ್ನು ಎಲ್ಲಾ ಕಾರ್ಯಗಳಿಗಾಗಿ ಬಳಸುವುದರ

ಜೊತೆಗೆ ಬೃಹತ್ ಗಾತ್ರದ ಕಲ್ಲು ಚಪ್ಪಡಿಗಳನ್ನು ಬಳಸಿ ಸಮಾಧಿಗಳನ್ನು ರೂಪಿಸಿದ್ದು, ಈ ಹಂತವನ್ನು ಕಬ್ಬಿಣ ಯುಗದ ಬೃಹತ್ ಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗಿದೆ.[೭]

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಹಳೆಯ ಶಿಲಾಯುಗದ ಕುರುಹುಗಳು ಅಷ್ಟಾಗಿ ಕಂಡುಬಂದಿಲ್ಲ ಆದರೆ ಪ್ರಸ್ತುತ ತಮಟಕಲ್ಲು ಪರಿಸರದ ಆಸುಪಾಸಿನಲ್ಲಿರುವ ಕೂನಬೇವು ಮತ್ತು ಸಂಗೇನಹಳ್ಳಿ ಕೆರೆ ಪರಿಸರದಲ್ಲಿ ಹಳೆಯ ಶಿಲಾಯುಗದ ಕೊಡಲಿಗಳು ಪತ್ತೆಯಾಗಿವೆ. ಅದರಲ್ಲೂ ಇವು ಮಧ್ಯ ಹಳೆಶಿಲಾಯುಗದ ಕಾಲದವುಗಳೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಈ ಹಿನ್ನಲೆಯಲ್ಲಿ ತಮಟಕಲ್ಲು ಪರಿಸರದಲ್ಲಿ ಹಳೆ ಶಿಲಾಯುಗದ ಮಾನವನ ಅಲೆದಾಟ ಸಹಜವಾಗಿ ಇದ್ದಿರಬೇಕು. ಹಾಗೆಯೇ ಹಳೇ ಶಿಲಾಯುಗದ ನಂತರ ಕಾಲವಾದ ಸೂಕ್ಷ್ಮ ಶಿಲಾಯುಗ ಮಾನವನ ಕುರುಹುಗಳು ಇದುವರೆಗಿನ ಸಂಶೋಧನೆಗಳಲ್ಲಿ ಬೆಳಕಿಗೆ ಬಂದಿರುವುದಿಲ್ಲ. ನೂತನ ಶಿಲಾಯುಗದಿಂದ ತಾಮ್ರ ಶಿಲಾಯುಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಯ ಕಾಲದ ಕುರುಹುಗಳು ಹೆಚ್ಚಾಗಿ ಕಂಡುಬಂದಿರುವುದರಿಂದ ಈ ಸಂಸ್ಕೃತಿಗಳ ಪ್ರಾಚೀನ ಕುರುಹುಗಳ ಬಗ್ಗೆ ಹೆಚ್ಚು ಗಮನಹರಿಸಲಾಗಿದೆ.

## ನೂತನ ಶಿಲಾಯುಗ ಸಂಸ್ಕೃತಿ

ಸೂಕ್ಷ್ಮ ಶಿಲಾಯುಗದ ನಂತರದ ಕಾಲಘಟ್ಟವೇ ನೂತನ ಶಿಲಾಯುಗ ಸಂಸ್ಕೃತಿಯು ಆರಂಭವಾಯಿತು. ಈ ಹಂತದಲ್ಲಿ ಮಾನವ ವಿಶಿಷ್ಟ ಉಪಕರಣಗಳನ್ನು ತಯಾರಿಸಿಕೊಂಡು ಹೊಳೆ, ಹಳ್ಳ, ಫಲವತ್ತಾದ ಜಮೀನುಗಳ ಪಕ್ಕದಲ್ಲಿ ಜೀವನ ಮಾಡಲು ತೊಡಗಿದನು.[೮] ಕರ್ನಾಟಕದಲ್ಲಿ ನೂತನ ಶಿಲಾಯುಗದ ಸಂಸ್ಕೃತಿಗೆ ಸಂಬಂಧಿಸಿದಂತೆ ಹಲವು ನೆಲೆಗಳು ಬೆಳಕಿಗೆ ಬಂದಿವೆ. ಅದರಂತೆ ಚಿತ್ರದುರ್ಗ ಜಿಲ್ಲಾ ಪರಿಸರದಲ್ಲಿ ಈವರೆಗೆ ಒಟ್ಟು ೧೧ ನೆಲೆಗಳನ್ನು ನವಶಿಲಾಯುಗದ ಸಂಸ್ಕೃತಿಗೆ ಸೇರಿದವುಗಳೆಂದು ಗುರುತಿಸಲಾಗಿದೆ.[೯]

ಪ್ರಸ್ತುತ ಅಧ್ಯಯನ ಪ್ರದೇಶವಾದ ತಮಟಕಲ್ಲು ಪರಿಸರದಲ್ಲಿ ಗ್ರಾಮದ ದಕ್ಷಿಣಕ್ಕಿರುವ ಬೆಟ್ಟದ ಕಣಿವೆಯೇ ಆದಿ ಮಾನವನ ಪ್ರಮುಖ ವಸತಿ ನೆಲೆಯಾಗಿತ್ತು. ಪ್ರಾಚೀನ ಮಾನವರು ಇಲ್ಲಿ ವಾಸ ಮಾಡಿದ್ದು ತಿಳಿಯುವುದರ ಜೊತೆಗೆ ನವಶಿಲಾಯುಗ ಕಾಲದ ಕುರುಹುಗಳು ಸಾಕ್ಷಿಯಾಗಿವೆ. ಈ ಸಂಸ್ಕೃತಿಯ ಕವಣೇಕಲ್ಲು, ಕಂದು, ಕೆಂಪು ಬಣ್ಣದ ಮಡಕೆ-ಕುಡಿಕೆಗಳು, ಕಲ್ಲಿನ ಕೊಡಲಿ ಮತ್ತು ಬೂದಿದಿಬ್ಬ ಹೆಚ್ಚಾಗಿ ಕಂಡುಬಂದಿವೆ.[೧೦] ಆದರೆ ಪ್ರಸ್ತುತವಾಗಿ ಈ ಪ್ರದೇಶದಲ್ಲಿ ಇಲ್ಲಿರುವ ಹಾಳು ಮಣ್ಣನ್ನು ಸ್ಥಳೀಯರು ತಮ್ಮ ಹೊಲಗಳಿಗೆ ಬಳಸಿರುವುದರಿಂದ ನೆಲೆಯೂ ವಿನಾಶದ ಅಂತ್ಯಕ್ಕೆ ತಲುಪಿದೆ. ಆದರೂ ಇಂದಿಗೂ ಈ ಕಣಿವೆಯಲ್ಲಿ ಪ್ರಾಗಿತಿಹಾಸದ ಅವಶೇಷಗಳಾದ ಮಡಕೆ-ಕುಡಿಕೆಗಳು ಮತ್ತು ಶಾತವಾಹನರ ಕಾಲದ ಕುರುಹುಗಳನ್ನು ಇಂದಿಗೂ ಕಾಣಬಹುದಾಗಿದೆ. ಹಾಗೆಯೇ ಬೆಟ್ಟದ ಬಂಡೆಗಳ ಮೇಲೆ ಮನುಷ್ಯನಾಕೃತಿಯ ಕೆಂಪು ಬಣ್ಣದ ವರ್ಣಚಿತ್ರಗಳನ್ನು ಕಾಣುತ್ತೇವೆ. ೧೦ ರಿಂದ ೧೫ ಸೆ.ಮೀ. ಉದ್ದವಿದ್ದು ಮನುಷ್ಯನ ಆಕಾರದ

ರೀತಿಯಲ್ಲಿ ಕಂಡಬಂದಿವೆ. ಸೂಕ್ಷ್ಮವಾಗಿ ಗ್ರಹಿಸಿದಾಗ ಈ ವರ್ಣಚಿತ್ರಗಳು ನವಶಿಲಾಯುಗದ ಪೂರ್ವದವು ಎಂದು ತಿಳಿಯಬಹುದಾಗಿದೆ. ಹಾಗೆಯೇ ಬೆಟ್ಟದ ಕಲ್ಲು ಬಂಡೆಗಳಲ್ಲಿ ಅಳಸಿಹೋದಂತಿರುವ ರೇಖಾಚಿತ್ರಗಳು ಮತ್ತು ಕುಟ್ಟಿದ ಚಿತ್ರಗಳು ಕಂಡುಬರುತ್ತವೆ.

ಈ ವರ್ಣಚಿತ್ರಗಳು ನವ ಶಿಲಾಯುಗ ಸಂಸ್ಕೃತಿಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ತಿಳಿಸುವ ಪ್ರಮುಖ ಕುರುಹುಗಳಾಗಿ ಸಹಾಯಕವಾಗಿವೆ. ಅದರಂತೆ ಪ್ರಸ್ತುತ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಗ್ರಾಮದ ಪಶ್ಚಿಮಕ್ಕೆ ಒಂದೂವರೆ ಕಿಲೋಮೀಟರ್ ಅಂತರದಲ್ಲಿ ಸೋಮಪ್ಪನ ಗುಡ್ಡವಿದೆ. ಈ ಗುಡ್ಡದಲ್ಲಿ ಎರೆಡು ಗುಹೆಗಳು ಕಂಡುಬರುತ್ತವೆ. ಗುಹೆಯಲ್ಲಿ ನವಶಿಲಾಯುಗ ಸಂಸ್ಕೃತಿಗೆ ಸೇರಿದ ಕಲ್ಲಿನ ಕೊಡಲಿಯನ್ನು ಗುರುತಿಸಲಾಗಿದೆ. ಇದು ೨೦ ಸೆ.ಮೀ. ಉದ್ದ ಮತ್ತು ೧೦. ಸೆ.ಮೀ ಅಗಲವನ್ನು ಹೊಂದಿದ್ದು ಮೇಲ್ಭಾಗ ಚೂಪಾಗಿದೆ. ಇದನ್ನು ಸ್ಥಳೀಯರು ಶಿವಲಿಂಗ ಮತ್ತು ನಾಗರಕಲ್ಲಿನ ಜೊತೆಯಲ್ಲಿಟ್ಟು ಪೂಜೆಯನ್ನು ಮಾಡುವರು. ಅದರಂತೆ ನವಶಿಲಾಯುಗದ ಮಾನವರು ಗುಹೆಯಲ್ಲಿ ವಾಸ ಮಾಡಿದರೆಂದು ತಿಳಿಯಬಹುದಾಗಿದೆ.

## ಬೂದಿದಿಬ್ಬ

ಕರ್ನಾಟಕದಲ್ಲಿ ೪೨ ಕಡೆಗಳಲ್ಲಿ ಬೂದಿದಿಬ್ಬಗಳು ಕಂಡುಬಂದಿವೆ. ಉಳಿದಂತೆ ಚಿತ್ರದುರ್ಗ ಜಿಲ್ಲೆಯ ರಾಮಗಿರಿ, ಸಂಗೇನಹಳ್ಳಿಕೆರೆ, ಎನ್ ಗೌರಿಪುರದಲ್ಲಿ ಕಾಣಬಹುದು. ಒಂದು ಎಕರೆಯಷ್ಟು ವಿಸ್ತಾರವಾದ ಬೂದಿದಿಬ್ಬಗಳು ಸುಟ್ಟ ಸಗಣಿಯ ಗುಡ್ಡೆಗಳಾಗಿವೆ. ಸಗಣಿಯನ್ನು ೮೦೦೦-೧೦೦೦೦ ಸೆಂಟಿಗ್ರೇಡ್‌ನಲ್ಲಿ ಸಗಣಿಯನ್ನು ಸುಟ್ಟಾಗ ಕಿಟ್ಟಗಳ ರೂಪ ತಾಳುತ್ತದೆ. ಸ್ಥಳೀಯರು ಈ ಸಗಣಿಯ ಗುಡ್ಡೆಯನ್ನು ಬೂದಿದಿನ್ನೆ ಅಥವಾ ಬೂದಿದಿಬ್ಬ ಎಂದು ಕರೆಯುವರು.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ರೀತಿಯ ಬೂದಿದಿಬ್ಬವನ್ನು ಕಾಣುತ್ತೇವೆ. ಗ್ರಾಮದ ಪೂರ್ವ ದಿಕ್ಕಿನಲ್ಲಿ ಬರುವ ಹನುಮಂತಪ್ಪ ಎಂಬುವವರ ಹೊಲದಲ್ಲಿ ಸರ್ವೆ ನಂಬರ್ ೩೭/೧ ರಲ್ಲಿ ಹಾಗೂ ಅಕ್ಕ ಪಕ್ಕದ ಹೊಲದಲ್ಲಿ ಬೂದಿದಿಬ್ಬವನ್ನು ಅಲ್ಲಿ ಸಿಕ್ಕಿರುವ ಮಡಕೆ ಕುಡಿಕೆಗಳ ಆಧಾರಗಳಿಂದ ತಿಳಿಯಬಹುದಾಗಿದೆ. ಆ ಹೊಲಗಳಲ್ಲಿ ಬೂದು ಮಣ್ಣನ್ನು ಕಾಣುವುದರ ಜೊತೆಗೆ ಅನೇಕ ಮಡಕೆ-ಕುಡಿಕೆಗಳನ್ನು ಕಾಣಬಹುದಾಗಿದೆ. ಕಪ್ಪು, ಕೆಂಪು ಮತ್ತು ಬೂದು ಬಣ್ಣದ ಮಡಕೆ ಚೂರುಗಳನ್ನು ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿಕೊಳ್ಳಲಾಗಿದೆ. ಇದರಿಂದ ನವಶಿಲಾಯುಗ ಮತ್ತು ಬೃಹತ್‌ಶಿಲಾಯುಗದ ಜನರು ಗೃಹಪಯೋಗಿ ವಸ್ತುಗಳನ್ನು ತಯಾರಿಸಿಕೊಳ್ಳತ್ತಿದ್ದರೆಂದು ತಿಳಿಯಬಹುದಾಗಿದೆ. ಜೊತೆಗೆ ಈ ಗ್ರಾಮಕ್ಕೆ ತಮಟಕಲ್ಲು ಎಂಬ ಹೆಸರು ಬರಲೂ ಕೂಡ ಈ ಸಂಸ್ಕೃತಿಯ ಪಾತ್ರ ಮಹತ್ವದಾಗಿದೆ. ಈ ಎಲ್ಲಾ ಪ್ರಾಗಿತಿಹಾಸದ ಅವಶೇಷಗಳ ಆಧಾರದಿಂದ ನವಶಿಲಾಯುಗದ ಬಹುದೊಡ್ಡ ನೆಲೆಯಾಗಿ ತಮಟಕಲ್ಲು ಪರಿಸರವು ಮಹತ್ವವನ್ನು ಪಡೆದುಕೊಂಡಿದೆ.

## ಶಿಲಾ–ತಾಮ್ರಯುಗ ಸಂಸ್ಕೃತಿ

ನೂತನ ಶಿಲಾಯುಗ ಸಂಸ್ಕೃತಿಯ ನಂತರ ವಿಕಸನಗೊಂಡ ಹಂತವಿದು. ತಾಮ್ರದ ಅದುರಿನ ಜ್ಞಾನ, ಲೋಹವಾಗಿ ಪರಿವರ್ತನೆ, ನೀಳಚಕ್ಕೆಗಳ ಉಪಯೋಗ, ಶಿಲೆಗೆ ಬದಲಾಗಿ ಲೋಹದ ಆಯುಧಗಳ ಬಳಕೆ, ಸುಟ್ಟ ಮಣ್ಣಿನ ಪಾತ್ರೆಗಳ ಬಳಕೆ, ಸುಧಾರಿಸಿದ ಬೇಸಾಯ ಪದ್ಧತಿ, ಮೊದಲಾದ ಮುಖ್ಯ ಲಕ್ಷಣಗಳನ್ನು ಗುರುತಿಸಿಕೊಂಡ ಸಾಂಸ್ಕೃತಿಕ ಹಂತವಿದಾಗಿದೆ.[೧೧] ನಮ್ಮ ಪುರಾತನರು ಬಳಸಿಕೊಳ್ಳಲಾರಂಭಿಸಿದ ಲೋಹಗಳಲ್ಲಿ ತಾಮ್ರವೇ ಮೊದಲನೆಯದೆಂಬುದು ಗಮನಿಸಬೇಕಾದ ಅಂಶ. ತಾಮ್ರದ ಅದಿರುಗಳಿಂದ ಲೋಹವನ್ನು ಬೇರ್ಪಡಿಸಿ ಹಲವು ಲೋಹಗಳನ್ನು ತಯಾರಿಸುವ ತಂತ್ರವನ್ನು ಕಂಡುಕೊಂಡಿದ್ದರು.

ಪ್ರಸ್ತುತ ಅಧ್ಯಯನ ಪ್ರದೇಶವು ಕೂಡ ತಾಮ್ರ ಶಿಲಾಯುಗ ಸಂಸ್ಕೃತಿಯ ಪ್ರಮುಖ ನೆಲೆಯಾಗಿದೆ ಎಂದು ಈ ಪರಿಸರದಲ್ಲಿ ಸಿಗುವಂತಹ ಕುರುಹುಗಳ ಮೂಲಕ ತಿಳಿಯಬಹುದಾಗಿದೆ. ಈ ಪರಿಸರದಲ್ಲಿ ದೊರೆತಿರುವ ತಾಮ್ರದ ಕುರುಹುಗಳ ಕಬ್ಬಿಣದ ಬಳೆ, ಕಬ್ಬಿಣದ ತುಣುಕು, ಮಣಿ, ಮಡಕೆಯ ಬಿಲ್ಲೆ, ಮಧ್ಯದಲ್ಲಿ ರಂಧ್ರವಿರುವ ಬಿಲ್ಲೆ, ತಾಮ್ರೋತ್ಪಾದನೆಯಲ್ಲಿ ವಿಶೇಷವಾಗಿ ಬಳಸಲಾಗತ್ತಿದ್ದ, ಮೈಲುತುತ್ತದ ಉಂಡೆಗಳು, ಚಿಲುಮೆ, ಮಣ್ಣಿನ ಹಣತೆ, ಶಿಲಾಯುಧಗಳ ತುಂಡುಗಳು, ದೊಡ್ಡಗಾತ್ರದ ಸುಟ್ಟಇಟ್ಟಿಗೆಗಳು, ಪ್ರಾಣಿಗಳ ದಂತಾವಶೇಷಗಳು[೧೨] ಇನ್ನೂ ಮುಂತಾದ ಅವಶೇಷಗಳು ಈ ಪರಿಸರದಲ್ಲಿ ಕಂಡುಬಂದಿವೆ. ಚಿತ್ರದುರ್ಗ ಪರಿಸರದ ಇಂಗಳದಾಳು, ಬೆಳ್ಳಿಗುಡ್ಡ ಮತ್ತು ಗೋನೂರು ಮತ್ತು ಸಮೀಪವಿರುವ ಗುಡ್ಡದ ರಂಗವ್ವನಹಳ್ಳಿಗಳಲ್ಲಿ ಪೂರ್ವಜರು ಗಣಿತೋಡಿ ತಾಮ್ರಲೋಹ ಸಂಗ್ರಹಿಸಿರುವುದು ಕಂಡುಬರುತ್ತದೆ. ಆದರೆ ಪ್ರಸ್ತುತ ಸ್ಥಳದಲ್ಲಿ ಅಂತಹ ಕುರುಹುಗಳು ಗೋಚರಿಸುವುದಿಲ್ಲ ಆದರೆ ಕುಲುಮೆದರ್ಜೆಯ ತಾಮ್ರವನ್ನು ಉತ್ಪಾದಿಸುವ ಘಟಕವಿದ್ದದು ದೃಡಪಟ್ಟಿರುತ್ತದೆ.

ಈ ಕಾರಣದಿಂದಲೇ ನಿವೇಶನದಲ್ಲಿ ತಾಮ್ರಪಟ್ಟದ ತಯಾರಿಕೆಯಲ್ಲಿ ಅಗತ್ಯವಿರುವ ತಾಮ್ರಗರ್ಭ ಅಥಾವ ಮೈಲುತುತ್ತ(ಕಾಪರ್ ಸಲ್ಫೇಟ್) ವಿಪುಲವಾಗಿ ದೊರೆಯುವುದನ್ನು ಕಾಣಬಹುದು. ಹಾಗಯೇ ತಮಟಕಲ್ಲು ಮಧ್ಯಭಾಗದ ವಿಶಾಲ ಹಾಗೂ ಸಮತಟ್ಟಾದ ಅಂಗಳದಲ್ಲಿ ತಾಮ್ರಸಂಸ್ಕರಣೆಗೆ ಸಂಬಂಧಿಸಿದ ಕುಲುಮೆಗಳ ಕುರುಹುಗಳು ಗೋಚರಿಸುತ್ತವೆ. ತಮಟಕಲ್ಲು ಎಂಬುದು ತಾಮ್ರಲೋಹ ಸಂಬಂಧವಾದ(ತಾಮ್ರಿಕ) ಎಡೆ. ಇದು ತಾಮ್ರಕುಟ್ಟಕರು ನೆಲೆಸಿದ್ದ ತಾಮ್ರಸಾಲೆಯನಿಸಿದ್ದು, ತಾಮ್ರಭಸ್ಮ ತಯಾರಿಕೆ ಕೇಂದ್ರವಾಗಿತ್ತೆನ್ನಲಾಗಿದೆ.[೧೩] ಈ ಎಲ್ಲಾ ಪ್ರಮುಖ ಕುರುಹುಗಳಿಂದ ತಮಟಕಲ್ಲು ಎಂಬ ಹೆಸರು ಬರಲು ತಾಮ್ರದ ಹಿನ್ನಲೆಯು ಪ್ರಮುಖವಾದ ಪಾತ್ರವನ್ನು ವಹಿಸುವುದಾಗಿದೆ.

## ಕಬ್ಬಿಣಯುಗ ಅಥವಾ ಬೃಹತ್ ಶಿಲಾಯುಗ ಸಂಸ್ಕೃತಿ

ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ಕುತೂಹಲಕರವಾದ ವಿವಿಧ ಮಾದರಿಯ ಬೃಹತ್ ಶಿಲಾಗೋರಿಗಳನ್ನು ನಿರ್ಮಿಸುತ್ತಿದ್ದುದರಿಂದ ಈ ಸಂಸ್ಕೃತಿಯನ್ನು ಬೃಹತ್ ಶಿಲಾಯುಗ

ಸಂಸ್ಕೃತಿ ಎಂದು ಕರೆಯಲಾಗುತ್ತಿದೆ. ಜೊತೆಗೆ ಈ ಹಂತದಲ್ಲಿ ಕಬ್ಬಿಣದ ಬಳಕೆಯ ಮಹತ್ವವನ್ನೂ ಕಾಣಬಹುದು. ಕಲ್ಲುಗೋರಿಗಳು ಈ ಜನರ ಪಾರಂಪರಿಕ ನಂಬಿಕೆಗಳ ತಳಹದಿಯ ಮೇಲೆ ರೂಪಿತವಾದವುಗಳಾಗಿವೆ.

ಈ ಸಂಸ್ಕೃತಿಯ ಜನರು ಜೀವಿಸುತ್ತಿದ್ದ ಪ್ರದೇಶಗಳನ್ನು ವಾಸ್ತವ್ಯದ ನೆಲೆಗಳೆಂದೂ ಹಾಗೂ ಶವ ಸಂಸ್ಕಾರದ ಕೇಂದ್ರಗಳನ್ನು ಗೋರಿ ನೆಲೆಗಳೆಂದೂ ಪ್ರತ್ಯೇಕವಾಗಿ ಅಧ್ಯಯನ ನಡೆಸಲಾಗಿದೆ. ದೇಶಿಯ ಹಾಗೂ ವಿದೇಶಿಯ ಪುರಾತತ್ವಜ್ಞರಿಂದ ಸಾಕಷ್ಟು ಅಧ್ಯಯನವು ನಡೆದು ಹಲವು ಹೊಸ ಹೊಸ ವಿವರಗಳು ಬೆಳಕಿಗೆ ಬಂದಿವೆ.[೧೪] ಪ್ರಸ್ತುತ ಪರಿಸರದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಕುರುಹುಗಳಾದ ವರ್ಣಚಿತ್ರಗಳು, ಮಡಕೆಕುಡಿಕೆಗಳು, ಬೂದಿದಿಬ್ಬ, ರೇಖಾಚಿತ್ರಗಳು ಕಂಡುಬಂದಿವೆ ಅದರಂತೆ ಅವುಗಳನ್ನು ಈ ಮುಂದಿನಂತೆ ಚರ್ಚಿಸಲಾಗಿದೆ.

## ವರ್ಣಚಿತ್ರಗಳು

ನವಶಿಲಾಯುಗಕ್ಕಿಂತ ಬೃಹತ್ ಶಿಲಾಯುಗದಲ್ಲಿ ಪಶು ಸಂಗೋಪನೆ ಅತೀ ಹೆಚ್ಚು ಬೆಳವಣಿಗೆಯಾಗಿದ್ದು ಅದಕ್ಕೆ ವರ್ಣಚಿತ್ರಗಳೇ ಸಾಕ್ಷಿ. ಈ ಸಂಸ್ಕೃತಿಯ ಮಾನವನು ಗೂಳಿ. ಆಡು. ಎತ್ತು ಮುಂತಾದ ಪ್ರಾಣಿಗಳನ್ನು ಸಾಕುತ್ತಿದ್ದನು ಎಂಬುದು ಈ ಕಾಲಘಟ್ಟದ ವರ್ಣಚಿತ್ರಗಳಿಂದ ತಿಳಿದು ಬಂದಿದೆ. ಮುಖ್ಯವಾಗಿ ಬಯಲು ಬಂಡೆಗಳ ಮೇಲೆ ಗೀರು ಮತ್ತು ಕುಟ್ಟು ಹಾಗೆ ಜಾನುವಾರುಗಳ ಚಿತ್ರಗಳು ಹೆಚ್ಚಾಗಿ ಕಂಡುಬಂದಿವೆ.

ಪ್ರಸ್ತುತ ಅಧ್ಯಯನ ಪ್ರದೇಶವಾದ ತಮಟಕಲ್ಲು ಗ್ರಾಮದ ದಕ್ಷಿಣ ದಿಕ್ಕಿನಲ್ಲಿರುವ ಬೆಟ್ಟದ ತುದಿಯಲ್ಲಿ ಹಾವಿನಹೆಡೆಯಾಕಾರದ ಕಲ್ಲುಬಂಡೆಯ ಒಳಪಾರ್ಶ್ವದಲ್ಲಿ ಗೂಳಿ ಮತ್ತು ಮನುಷ್ಯರ ಚಿತ್ರಗಳನ್ನು ಈ ಹಿಂದೆ ಸಂಶೋಧಕರು ಪತ್ತೆಹಚ್ಚಿದ್ದರು. ಈ ಚಿತ್ರಗಳು ಬೃಹತ್‌ಶಿಲಾಯುಗ ಸಂಸ್ಕೃತಿಯ ಸಾಮಾಜಿಕ, ಸಾಂಸ್ಕೃತಿಕ ಮಹತ್ವವನ್ನು ತಿಳಿಸುವುದರ ಜೊತೆಗೆ ಆದಿ ಮಾನವ ತನ್ನ ದುಃಖ, ಸಂತೋಷ ಭಾವನೆಗಳನ್ನು ತಿಳಿಯಲು ಆಕರವಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕ್ಷೇತ್ರಕಾರ್ಯಕೈಗೊಂಡಾಗ ಈ ವರ್ಣಚಿತ್ರಗಳ ಮೇಲೆ ಸ್ಥಳೀಯರು ಬೇರೆ ಬೇರೆ ಬಣ್ಣಗಳನ್ನು ಬರೆದಿರುವುದರಿಂದ ಅಸ್ಪಷ್ಟವಾಗಿವೆ. ಅದರಂತೆ ಬೆಟ್ಟದ ಗುಹೆಯ ಬಂಡೆಗಳ ಮೇಲೆ ಅಳಸಿಹೋದಂತಿರುವ ಕೆಂಪು ಬಣ್ಣದ ವರ್ಣಚಿತ್ರಗಳನ್ನು ಹೆಚ್ಚು ಕಾಣುತ್ತೇವೆ.

ಆದರೆ ಸ್ಥಳೀಯರಿಗೆ ಹತ್ತಿರವಾಗಿರುವ ಈ ಬೆಟ್ಟವು ಪ್ರಾಗಿತಿಹಾಸದ ಕುರುಹುಗಳ ಮೇಲೆ ಬೇರೆ ಬಣ್ಣವನ್ನು ಬಳದಿರುವುದರಿಂದ ಅವುಗಳು ಅಸ್ಪಷ್ಟವಾಗಿವೆ.

### ಮೃತ್ಪಾತ್ರೆಗಳು

ಬೃಹತ್ ಶಿಲಾಯುಗದ ಮಾನವನ ಜೀವನ ಕ್ರಮವನ್ನು ತಿಳಿಯಲು ಮೃತ್ಪಾತ್ರೆಗಳು ಪ್ರಮುಖ ಆಕಾರಗಳಾಗಿ ಕಂಡುಬರುತ್ತವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಗ್ರಾಮದ ದಕ್ಷಿಣದಲ್ಲಿರುವ ರಂಗನಾಥ ಬೆಟ್ಟದ ಮಧ್ಯಭಾಗದಲ್ಲಿ ಈ ಹಿಂದೆ ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದ ಮಡಕೆ – ಕುಡಿಕೆಗಳನ್ನು ಪತ್ತೆ ಹಚ್ಚಿದ್ದರು ಅದರಂತೆ ಪ್ರಸ್ತುತ ಕ್ಷೇತ್ರ ಕಾರ್ಯ ಕೈಗೊಂಡಾಗ ಈಗಲೂ ಸಹ ಅವುಗಳನ್ನು ಕಾಣಬಹುದಾಗಿದೆ. ಹಾಗೆಯೇ ಪೂರ್ವ ದಿಕ್ಕಿನಲ್ಲಿ ಕಂಡುಬರುವ ತಳವಾರ ಒಬಜ್ಜ ಎಂಬುವವರ ಹೊಲದಲ್ಲಿ ಇಂತಹ ಕೆಂಪು ಮತ್ತು ಕಪ್ಪು ಬಣ್ಣದ ಮಡಕೆ–ಕುಡಿಕೆಗಳನ್ನು ಕಾಣಬಹುದಾಗಿದ್ದು ಅವುಗಳನ್ನು ಸಂಗ್ರಹಿಸಲಾಗಿದೆ. ಇವುಗಳ ಆಧಾರದಿಂದ ಬೃಹತ್‌ಶಿಲಾ ಸಂಸ್ಕೃತಿಯು ಈ ಪರಿಸರದಲ್ಲಿತ್ತೆಂದು ತಿಳಿಯುವುದರ ಜೊತೆಗೆ ನವ ಶಿಲಾಯುಗ ಮತ್ತು ಬೃಹತ್ ಶಿಲಾಯುಗವು ಹಂತ ಹಂತವಾಗಿ ಬೆಳೆದು ಬಂದಿದನ್ನು ತಿಳಿಯಬಹುದಾಗಿದೆ.

ಈ ಮೇಲಿನ ಎಲ್ಲಾ ಪ್ರಾಗಿತಿಹಾಸದ ಕುರುಹುಗಳ ಆಧಾರದ ಮೇಲೆ ತಮಟಕಲ್ಲು ಪರಿಸರವು ಹೆಚ್ಚು ವ್ಯಾಪಕತೆಯನ್ನು ಪಡೆದುಕೊಂಡಿದೆ. ಪ್ರಾಗಿತಿಹಾಸದ ಪ್ರಮುಖ ಸಾಂಸ್ಕೃತಿಕ ಹಂತಗಳನ್ನು ತಿಳಿಸುವ ನೆಲೆಯಾಗಿದೆ. ಈ ಪರಿಸರದಲ್ಲಿ ನವಶಿಲಾಯುಗ, ತಾಮ್ರಶಿಲಾಯುಗ ಮತ್ತು ಬೃಹತ್ ಶಿಲಾಯುಗದ ಕುರುಹುಗಳ ಆಧಾರದಿಂದ ಒಂದು ಸಂಸ್ಕೃತಿಯಿಂದ ಮತ್ತೊಂದು ಸಂಸ್ಕೃತಿಗಳ ನಡುವೆ ಸಾಮಾಜಿಕ, ಸಾಂಸ್ಕೃತಿಕ, ಮತ್ತು ಆರ್ಥಿಕ ಅಂಶಗಳನ್ನು ತಿಳಿಯಲು ಈ ನೆಲೆ ಪ್ರಾಮುಖ್ಯತೆ ಬೀರಿದೆ.

ಪುರಾತತ್ವಿಕವಾಗಿ ಮಾತ್ರವಲ್ಲದೆ, ಚಾರಿತ್ರಿಕ ಮತ್ತು ಸಾಂಸ್ಕೃತಿಕ ನೆಲೆಯೂ ಆಗಿ ಮಹತ್ವ ಪಡೆದುಕೊಂಡಿರುವ ತಮಟಕಲ್ಲು ನಿವೇಶನವು ಪ್ರತ್ಯೇಕ ಹಾಗೂ ವೈಜ್ಞಾನಿಕ ಶೋಧಗಳಿಗೆ ಇದೀಗ ತನ್ನನ್ನು ತೆರೆದುಕೊಂಡಿದೆ ಎಂಬುದು ಖಚಿತವಾಗಿದೆ. ಈ ಗ್ರಾಮವೂ ಪ್ರಾಗ್ಯೆತಿಹಾಸ ಕಾಲದಿಂದ ಇಂದಿನವರೆಗೂ ಮಾನವನ ಆಶ್ರಯತಾಣವಾಗಿರುವ ಜಿಲ್ಲೆಯ ಚರಿತ್ರೆಗೆ ಬಹುದೊಡ್ಡ ಆಕರವಾಗಿ ಗಮನ ಸೆಳೆದಿದೆ.[೧೫] ಹಾಗೆಯೇ ಚಿತ್ರದುರ್ಗ ಜಿಲ್ಲೆಯ ನವಶಿಲಾಯುಗ ಮತ್ತು ಬೃಹತ್ ಶಿಲಾಯುಗಗಳ ನೆಲೆಗೆ ತಮಟಕಲ್ಲು ಪರಿಸರವು ಕೂಡ ಸೇರುವುದರ ಜೊತೆಗೆ ಹೆಚ್ಚು ವ್ಯಾಪಕತೆಯನ್ನು ಪಡೆದುಕೊಂಡಿದೆ.

### ನಂಬಿಕೆ

ಮನುಷ್ಯನ ವೈಯಕ್ತಿಕ ವಿಚಾರಗಳ ತಳಹದಿಯ ಮೇಲೆ ನಂಬಿಕೆ ನಿಂತಿರುವುದು. ಪ್ರಾಗಿತಿಹಾಸದಲ್ಲಿ ವರ್ಣಚಿತ್ರಗಳು ನಾಶವಾಗಬಾರದೆಂದು ಕಲ್ಲಾಸೆರೆ ಮತ್ತು ಗವಿಗಳಲ್ಲಿ ಈ ಚಿತ್ರಗಳನ್ನು ಬಿಡಿಸಿದ್ದಾರೆ. ಈ ವಿಚಾರದಲ್ಲಿ ಶಾಶ್ವತವಾಗಿ ಉಳಿಯುವುದೆಂಬುವುದು ನಂಬಿಕೆಯಾಗುತ್ತದೆ. ಮಂಡಲದ ಚಿತ್ರಗಳನ್ನು ಬಿಡಿಸುವುದು ಮಾಂತ್ರಿಕತೆಯನ್ನು ಸೂಚಿಸುವುದು ಹಾಗೂ ಪಾದಗಳ ಗೀರು ಚಿತ್ರಗಳು ಇಂದು ಧಾರ್ಮಿಕವಾಗಿ ಮಹತ್ವ ಬೀರಿವೆ. ಪ್ರಸ್ತುತ

ಅಧ್ಯಯನ ಕ್ಷೇತ್ರದಲ್ಲಿ ರಂಗನಾಥ ಸ್ವಾಮಿಯ ಬೆಟ್ಟದ ಮೇಲೆ ಗೀರು ಚಿತ್ರದ ಪಾದಗಳನ್ನು ಕಾಣುತ್ತೇವೆ. ಇವುಗಳನ್ನು ಸ್ಥಳೀಯರು ಆಂಜನೇಯ ಮತ್ತು ರಂಗನಾಥನ ಪಾದಗಳೆಂದು ನಂಬಿದ್ದಾರೆ. ಹೀಗೆ ಪ್ರಾಗಿತಿಹಾಸದ ಕೆಲವೊಂದು ಚಿತ್ರಗಳು ಇಂದು ಸಾಮಾಜಿಕ ಮತ್ತು ಧಾರ್ಮಿಕವಾಗಿ ನಂಬಿಕೆಯಾಗಿ ಪ್ರಭಾವ ಬೀರಿವೆ.

## ಕಾಲಮಾನ

ಪ್ರಾಗಿತಿಹಾಸದಲ್ಲಿ ಹಳೆಶಿಲಾಯುಗ, ಸೂಕ್ಷ್ಮಶಿಲಾಯುಗ, ನವಶಿಲಾಯುಗ ಮತ್ತು ಬೃಹತ್ ಶಿಲಾಯುಗವೆಂದು ನಾಲ್ಕು ಕಾಲಘಟ್ಟಗಳಿವೆ. ಈ ಎಲ್ಲಾ ಕಾಲಘಟ್ಟಗಳ ಮಧ್ಯೆ ಹೋಲಿಕೆಯಲ್ಲಿ ವ್ಯತ್ಯಾಸಗಳಿವೆ. ಮೂಲಸ್ವರೂಪದ ಕಲ್ಲಿನಿಂದ ರಚನೆಯಾದ ಕೊರೆಯುವ, ಎರೆಯುವ ಆಯುಧಗಳು ಹಳೆಶಿಲಾಯುಗದವು. ಸೂಕ್ಷ್ಮವಾದ ನೀಳಚಕ್ಕೆಗಳನ್ನು ಹೊಂದಿರುವ ಸೂಕ್ಷ್ಮ ಶಿಲಾಯುಗದವು. ನಯವಾದ ಕೊಡಲಿ ಮತ್ತು ಬೂದು ಬಣ್ಣದ ಮಡಕೆಯನ್ನು ಬಳಸುವ ಕಾಲವೇ ನವಶಿಲಾಯುಗ. ಕಬ್ಬಿಣ ಹಾಗೂ ಕಪ್ಪು ಮತ್ತು ಕೆಂಪು ಬಣ್ಣದ ಮಡಕೆಗಳನ್ನು ಬಳಸುವ ಕಾಲವೇ ಬೃಹತ್ ಶಿಲಾಯುಗ ಈ ರೀತಿ ಹೋಲಿಕೆ ಮೂಲಕ ಕಾಲವನ್ನು ನಿರ್ಧರಿಸಬಹುದು. ಸ್ಥರಗಳನ್ನು ಆಧರಿಸಿ ಕಾಲವನ್ನು ನಿರ್ಧರಿಸಬಹುದು. ಅತ್ಯಂತ ಕೆಳಗಿನ ಸ್ತರ ಸೂಕ್ಷ್ಮ ಶಿಲಾಯುಗದ್ದು, ಮಧ್ಯದ ಸ್ಥರ ನವಶಿಲಾಯುಗದ್ದು, ಮೇಲಿನ ಸ್ಥರ ಬೃಹತ್ ಶಿಲಾಯುಗದ್ದು, ಎಂದು ಗುರುತಿಸಬಹುದು.

ಕೆಲವೊಂದು ಸಲ ನವ ಶಿಲಾಯುಗದ ಅವಶೇಷಗಳು ಸೂಕ್ಷ್ಮ ಶಿಲಾಯುಗದ ಸ್ಥರದಲ್ಲಿ ಸಿಗುವ ಸಾಧ್ಯತೆಗಳಿರುವುದರಿಂದ ಸೂಕ್ಷ್ಮವಾಗಿ ಗಮನಿಸಿ ಕಾಲವನ್ನು ಬೇರ್ಪಡಿಸುವ ಅವಶ್ಯಕತೆ ಇದೆ. ಆದಿ ಹಳೆಶಿಲಾಯುಗವು ೧ ಲಕ್ಷದಿಂದ ೪ ಲಕ್ಷ ವರ್ಷಗಳಷ್ಟು ಪೂರ್ವದ್ದು, ಮಧ್ಯ ಹಳೆಶಿಲಾಯುಗವು ೪೦ ಸಾವಿರದಷ್ಟು ಪೂರ್ವದ್ದು, ಅಂತ್ಯ ಹಳೆಯ ಶಿಲಾಯುಗವು ೨೫೦೦೦ ವರ್ಷಗಳ ಪೂರ್ವದ್ದು, ಸೂಕ್ಷ್ಮ ಶಿಲಾಯುಗವು ೧೦೦೦೦ ವರ್ಷಗಳ ಪೂರ್ವದ್ದು, ನವ ಶಿಲಾಯುಗವು ಕ್ರಿ.ಪೂ ೨೦೦೦-೧೦೦೦ರ ವರೆಗೆ ಅಸ್ತಿತ್ವದಲ್ಲಿತ್ತು. ಬೃಹತ್‌ಶಿಲಾಯುಗವು ಕ್ರಿ.ಪೂ ೧೨೦೦ ರಿಂದ ಕ್ರಿ.ಪೂ ೮೦೦ ರವರೆಗೆ ಎಂದು ಪ್ರಗಿತಿಹಾಸದ ಕಾಲಮಾನವನ್ನು ತಿಳಿಯಬಹುದಾಗಿದೆ.[೧೬]

## ಇತಿಹಾಸ ಆರಂಭಕಾಲ

ಮಾನವನು ಜೀವನದ ವಿವಿಧ ಸಂಸ್ಕೃತಿಗಳ ಹಂತದಿಂದ ಲಿಪಿಯ ಬಳಕೆಗೆ ಬಂದ ಹಂತವನ್ನು ಇತಿಹಾಸ ಆರಂಭ ಕಾಲವೆಂದು ಗುರುತಿಸಬಹುದಾಗಿದೆ. ಈ ಹಂತಕ್ಕೆ ಸಂಬಂಧಿಸಿದ ಹಲವಾರು ನೆಲೆಗಳ ಅಧ್ಯಯನ ಹಾಗೂ ಉತ್ಖನನಗಳು ಈ ಸ್ಥಿತ್ಯಂತರ ಕಾಲದ ಬಗೆಗೆ ಸಾಕಷ್ಟು

ಮಾಹಿತಿಗಳನ್ನು ಒದಗಿಸಿವೆ. ಕರ್ನಾಟಕದ ದಕ್ಷಿಣ ಭಾಗದವರೆಗೆ ಮೌರ್ಯ ಸಾಮ್ರಾಜ್ಯದ ಪ್ರಾಬಲ್ಯ ವ್ಯಾಪಿಸಿದ ಬಗೆಗೆ ಅಲ್ಲಲ್ಲಿ ದೊರೆತಿರುವ ಶಿಲಾ ಲಿಪಿಗಳು ಹಾಗೂ ವಸ್ತು ಅವಶೇಷಗಳು ದೃಢಪಡಿಸಿವೆ.[೧೭] ನಂತರದ ಕಾಲಮಾನದ ಪುರಾವೆಗಳಾದ ನಾಣ್ಯಗಳು, ಶಿಲ್ಪಗಳು, ವಾಸ್ತುಶೈಲಿ ಹಾಗೂ ಶಾಸನಗಳು, ಶಾತವಾಹನರ ಮತ್ತು ಅವರ ನಂತರದ ಚುಟು, ಮಹಾರಥಿ ದೊರೆಗಳ ಆಳ್ವಿಕೆಗೆ ಸಂಬಂಧಪಟ್ಟವುಗಳಾಗಿವೆ.

ಪ್ರಸ್ತುತ ಅಧ್ಯಯನ ಕ್ಷೇತ್ರವಾದ ತಮಟಕಲ್ಲು ಪರಿಸರದಲ್ಲಿ ಇತಿಹಾಸದ ಆರಂಭಕಾಲದ ಅವಶೇಷಗಳಾದ ಚಿತ್ರಿತ ಮಡಕೆಭಾಗಗಳನ್ನು ಸಂಗ್ರಹಿಸಲಾಗಿದೆ. ಇದರಿಂದ ಈ ಪರಿಸರದಲ್ಲಿ ಇತಿಹಾಸ ಆರಂಭಯುಗದ ಕಾಲಘಟ್ಟವನ್ನು ತಿಳಿಯಬಹುದಾಗಿದೆ.

**ಇತಿಹಾಸ**

ಮಾನವನ ವಿಕಸನ ಹಂತದಲ್ಲಿ ಅಕ್ಷರಗಳ ಆವಿಷ್ಕಾರ ಬಹುಮುಖ್ಯವಾದ ಅಂಶವಾಗಿದೆ. ಅಕ್ಷರಗಳ ಆವಿಷ್ಕಾರದ ನಂತರದ ಹಂತವನ್ನು ಅಂದರೆ ಬರವಣಿಗೆಯು ಗೊತ್ತಾದ ಅವಧಿಯನ್ನು ಇತಿಹಾಸ ಕಾಲವೆಂದು ಕರೆಯಬಹುದು. ಈ ಪ್ರದೇಶದಲ್ಲಿ ಶಾಸನಗಳು ದೊರೆಯುವ ಕಾಲದಿಂದ ಅಂದರೆ ಮೌರ್ಯರಿಂದ ಹಿಡಿದು ಚಿತ್ರದುರ್ಗ ಪಾಳೆಗಾರರ ಕಾಲದವರೆಗೂ ಆಳ್ವಿಕೆ ನೆಡೆಸಿದ ವಿವಿಧ ರಾಜವಂಶಗಳ ಪರಿಚಯವನ್ನು ಇಲ್ಲಿ ತಿಳಿಯಬಹುದು. ವಿವಿಧ ಕಾಲಘಟ್ಟಗಳಲ್ಲಿ ಕರ್ನಾಟಕವನ್ನಾಳಿದ ಪ್ರಮುಖ ರಾಜಮನೆತನಗಳ ಸಾಮ್ರಾಜ್ಯದೊಳಗೆ ಈ ಭಾಗವು ಸೇರಿತ್ತು. ಕೆಲವು ಆಡಳಿತ ವಿಭಾಗಗಳಿಂದಲೂ ಈ ವಿಷಯ ದೃಢಪಡುತ್ತದೆ.[೧೮]ಐತಿಹಾಸಿಕ ಹಿನ್ನಲೆಯನ್ನು ಹೊಂದಿರುವ ಈ ಪರಿಸರದಲ್ಲಿ ವಿಜಯನಗರದ ಅರಸರು ಮತ್ತು ಚಿತ್ರದುರ್ಗದ ಪಾಳೆಗಾರರು ಮತ್ತು ಮೈಸೂರು ಒಡೆಯರು ಪ್ರಮುಖರಾಗಿದ್ದಾರೆ.[೧೯]

## ೨.೪ ರಾಜಕೀಯ ಇತಿಹಾಸ

**ಮೌರ್ಯ**

ಉತ್ತರ ಭಾರತದಲ್ಲಿ ಪ್ರಪ್ರಥಮವಾಗಿ ಐತಿಹಾಸಿಕ ಸಾಮ್ರಾಜ್ಯಕ್ಕೆ ಅಡಿಗಲ್ಲು ಹಾಕಿದ ಮೌರ್ಯರ ಸಾಮ್ರಾಜ್ಯವನ್ನು ಕಾಣುತ್ತೇವೆ. ಚಿತ್ರದುರ್ಗ ಜಿಲ್ಲೆಯ ಸೇರಿತ್ತೆಂಬುದಕ್ಕೆ ನಮಗೆ ಮೊಳಕಾಲ್ಮೂರು ತಾಲೂಕಿನಲ್ಲಿ ದೊರೆತ ಅಶೋಕನ ಶಾಸನಗಳು ಆಧಾರವಾಗಿವೆ.[೨೦] ಚಿತ್ರದುರ್ಗದ ಸುತ್ತಲೂ ಇದ್ದ ಪ್ರದೇಶಗಳು ಕ್ರಿಪೂ ೬ನೆಯ ಶತಮಾನದಿಂದಲೂ ಔತ್ತರೇಯರ ಆಳ್ವಿಕೆಗೆ ಒಳಪಟ್ಟಿದ್ದವೆಂದು ಹೇಳಬಹುದು. ನಂದರು ಮೌರ್ಯರು ಅನುಕ್ರಮವಾಗಿ ಈ ಭಾಗದ ಒಡೆಯರಾದರು.

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನಲ್ಲಿ ದೊರೆತಿರುವ ಅಶೋಕನ ಶಾಸನಗಳು ಮೌರ್ಯರ ಆಳ್ವಿಕೆಯನ್ನು ಅಧಿಕೃತವಾಗಿ ಸ್ಪಷ್ಟಪಡಿಸುವ ಆಧಾರಗಳಾಗಿವೆ. ಅಶೋಕನ ಹದಿಮೂರನೆಯ ಶಾಸನಗಳು ದಕ್ಷಿಣ ರಾಜ್ಯಗಳ ಹೆಸರುಗಳನ್ನು ತಿಳಿಸುತ್ತವೆ. ಅವು ಬ್ರಹ್ಮಗಿರಿಯ ಸಿದ್ಧಾಪುರ, ಜಟಿಂಗ ರಾಮೇಶ್ವರದಲ್ಲಿ ಮೌರ್ಯ ಸಾಮ್ರಾಜ್ಯದ ಗಡಿಗಳನ್ನು ಸೂಚಿಸುವ ಗುರುತುಗಳಾಗಿವೆ ಎನ್ನುವುದು ಚರಿತ್ರೆಕಾರರಾದ ಅ.ಸುಂದರ ಅವರ ಅಭಿಪ್ರಾಯ.

ಹಾಗೆಯೇ ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿಯ ಪ್ರದೇಶವು ಸಹ ಮೌರ್ಯ ಸಾಮ್ರಾಜ್ಯದ ಭಾಗವಾಗಿದ್ದು ಅದರ ದಕ್ಷ ಆಡಳಿತ ಪದ್ಧತಿ ಮೌರ್ಯರ ಸಾಂಸ್ಕೃತಿಕ ಪರಂಪರೆ ವ್ಯಾಪ್ತಿಗೆ ಒಳಪಟ್ಟಿತ್ತು. ಇದರ ಸಮೀಪವಿರುವ ಪ್ರಸ್ತುತ ಅಧ್ಯಯನ ಪ್ರದೇಶವಾದ ತಮಟಕಲ್ಲು ಗ್ರಾಮವು ಮೌರ್ಯರ ಸಾಮ್ರಾಜ್ಯದಲ್ಲಿತ್ತು ಎಂದು ಹೇಳಬಹುದು.

**ಶಾತವಾಹನ**

ಕರ್ನಾಟಕ ಚಾರಿತ್ರಿಕ ಯುಗದಲ್ಲಿ ಮೊಟ್ಟಮೊದಲಿಗೆ ಅಸ್ತಿತ್ವಕ್ಕೆ ಬಂದ ರಾಜ್ಯ ಮತ್ತು ಸಾಮ್ರಾಜ್ಯಗಳಲ್ಲಿ ಶಾತವಾಹನ ಸಾಮ್ರಾಜ್ಯ ಪ್ರಮುಖವಾದುದು. ಶಾತವಾಹನರು ಮೊದಲಿಗೆ ಮೌರ್ಯರ ಸಾಮಂತರಾಗಿದ್ದು ಅವರ ನಂತರ ದಕ್ಷಿಣ ಭಾರತದಲ್ಲಿ ಸ್ವತಂತ್ರರಾದರು. ಅವರ ಸಾಮ್ರಾಜ್ಯಗಳಲ್ಲಿ ಕರ್ನಾಟಕವು ಮೊದಲ ಭಾಗವಾಗಿದ್ದು ಅವರು ದಖ್ಖನ್ನಿನಲ್ಲಿ ಮಾತ್ರವಲ್ಲದೆ ಉತ್ತರ ಭಾರತದ ಹಲವು ಪ್ರದೇಶಗಳ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿ ಉತ್ತರ ಭಾರತ ಮತ್ತು ದಕ್ಷಿಣ ಭಾರತವನ್ನು ಒಂದುಗೂಡಿಸಲು ಪ್ರಯತ್ನಿದರು.

ಅವರ ಸಾಮ್ರಾಜ್ಯ ಉತ್ತರದಲ್ಲಿ ಸಾಂಚಿಯಿಂದ ಹಿಡಿದು ದಕ್ಷಿಣದಲ್ಲಿ ಕೊಂಕಣದವರೆಗೆ ಮತ್ತು ಪೂರ್ವ ಪಶ್ಚಿಮಗಳ ಸಮುದ್ರದವರೆಗೂ ವಿಸ್ತರಿಸಿತ್ತು ಎನ್ನಲಾಗಿದೆ. ಕರ್ನಾಟಕದ ಪ್ರಮುಖ ರಾಜವಂಶದವರಾದ ಶಾತವಾಹನರು ತಮ್ಮನ್ನು ಕುಂತಲ ಸ್ವಾಮಿಗಳೆಂದು ಕರೆದುಕೊಂಡಿದ್ದುಂಟು. ಚಿತ್ರದುರ್ಗ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶದಲ್ಲಿ ದೊರೆತ ಉತ್ತಮ ಜಾತಿಯ ಜಾಸ್ಪರ್, ಕಾರ್ನೆಲಿಯನ್, ಆಗೇಟ್ ಮುಂತಾದ ಶಿಲೆಗಳು, ಮಣಿಗಳು, ದಂತ, ಶಂಖ, ಸುಟ್ಟಮಣ್ಣಿನ, ಗಾಜಿನ ನಾನಾ ಬಗೆಯ ಮಣಿಗಳು ಶಾತವಾಹನರ ಸಾಮಾಜಿಕ ಸಂಸ್ಕೃತಿಗೆ ಹಿಡಿದ ಕನ್ನಡಿಯಂತಿವೆ. ಹಾಗೆಯೇ ಪ್ರಸ್ತುತ ಅಧ್ಯಯನ ಪ್ರದೇಶವಾದ ತಮಟಕಲ್ಲು ಪರಿಸರದಲ್ಲಿ ಕ್ರಿಸ್ತಶಕಾರಂಭಕಾಲದಿಂದ, ಅಂದರೆ ಶಾತವಾಹನ ಮಹಾರತಿಗಳ ಆಡಳಿತಾವಧಿಯಿಂದ ಆರಂಭಗೊಳ್ಳುವ ಎಲ್ಲಾ ಲಕ್ಷಣಗಳನ್ನು ಒಳಗೊಂಡಿವೆ. ಶಾತವಾಹನಕಾಲೀನ ನೆಲೆಗಳು ಚಿತ್ರದುರ್ಗ ತಾಲೂಕಿನ ಚಿಪ್ಪಿನಕೆರೆ, ತುರುವನೂರು ಬೆಳಗಟ್ಟ, ಬಗ್ಗಲುರಂಗವ್ವನಹಳ್ಳಿ, ಕೂನಬೇವು, ಚಿನ್ನೂರುತಿಪ್ಪಯ್ಯನಹಟ್ಟಿ ನರೇನಾಹಾಳ್, ದೊಡ್ಡಮರಡಿ ಮೊದಲಾದೆಡೆಗಳಲ್ಲಿ ಶೋಧಗೊಂಡಿವೆ. ಈ ನಿವೇಶನಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಪ್ಪು-ಕೆಂಪು ಮಡಕೆಗಳ ಚೂರುಗಳು, ಕಬ್ಬಿಣದ ಬಳೆಗಳು, ಎಲುಬಿನ ಚೂರುಗಳು, ಮಣಿಗಳು,

ಜಾಡಿಗಳು, ಕವಣೆಕಲ್ಲುಗಳು– ಹೀಗೆ ನಾನಾ ತೆರನಾದ ಅವಶೇಷಗಳು ಕಂಡುಬರುತ್ತವೆ. ಬಿಳಿವರ್ಣದ ರೇಖಾಚಿತ್ರಗಳಿಂದ ಅಲಂಕರಿಸಿದ ಮಡಕೆಗಳು ಇಲ್ಲೆಲ್ಲಾ ಹರಡಿಕೊಂಡಿವೆ. ಚಿಪ್ಪಿನಕೆರೆಯಿಂದ ದಕ್ಷಿಣಕ್ಕೆ ೧೫ ಕಿ.ಮೀ. ಹಾಗೂ ಬೆಳಗಟ್ಟದಿಂದ ಪೂರ್ವಕ್ಕೆ ೮ ಕಿ.ಮೀ ಅಂತರದಲ್ಲಿರುವ ತಮಟಕಲ್ಲು ನಿವೇಶನವೂ ಈಗ ಇವುಗಳ ಸಾಲಿಗೆ ಸೇರುತ್ತಲಿದೆ.

**ಕದಂಬರು**

ಕದಂಬರು ಶಾತವಾಹನರ ನಂತರ ಆಳಿದ ಅರಸು ಮನೆತನವಾಗಿದೆ. ಈ ಮನೆತನಕ್ಕೆ ಸಂಬಂಧಿಸಿದ ಪ್ರಮುಖ ಶಿಲಾಶಾಸನವು ಚಂದ್ರವಳ್ಳಿಯ ಸಿದ್ದೇಶ್ವರ ದೇವಾಲಯದ ಮುಂದಿನ ಬೃಹತ್ ಬಂಡೆಗಲ್ಲಿನ ಮೇಲಿದೆ. ಇದನ್ನು ಮೊಟ್ಟಮೊದಲು ಓದಿ ಅರ್ಥೈಸಿದವರು ಎಂ.ಎಚ್.ಕೃಷ್ಣ. ನಂತರ ಈ ಶಾಸನವನ್ನು ಬಿ.ರಾಜಶೇಖರಪ್ಪ ಅವರು ಪುನರ್‌ಪರಿಶೀಲಿಸಿ ವಿಭಿನ್ನವಾದ ಮಾಹಿತಿಯನ್ನು ಪ್ರಕಟಿಸಿದ್ದಾರೆ. ಇದರಿಂದ ಕದಂಬರ ಆಳ್ವಿಕೆಗೆ ಚಿತ್ರದುರ್ಗವು ಒಳಪಟ್ಟಿತ್ತೆಂಬ ಸಂಗತಿ ತಿಳಿಯುತ್ತದೆ.

ಪ್ರಸ್ತುತ ಅಧ್ಯಯನ ಪ್ರದೇಶವಾದ ತಮಟಕಲ್ಲು ಪರಿಸರದಲ್ಲಿ ಗ್ರಾಮದ ಪೂರ್ವಕ್ಕೆ ಬರುವ ಹನುಮಂತಪ್ಪನ ಹೊಲದಲ್ಲಿರುವ ಶಾಸನವು ಕದಂಬರ ಕಾಲಕ್ಕೆ ಸೇರದ್ದು ಎಂದು ವಿದ್ವಾಂಸರು ಅಭಿಪ್ರಾಯದ ಜೊತೆಗೆ ಇದು ೫ನೇ ಶತಮಾನಕ್ಕೆ ಸೇರಿದ್ದು ಎಂಬುದಾಗಿ ತಿಳಿಸಿದ್ದಾರೆ. ಇದರ ಆಧಾರದ ಮೇಲೆ ತಮಟಕಲ್ಲು ಪರಿಸರವು ಕದಂಬರ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿಯಬಹುದಾಗಿದೆ.

**ಬಾದಾಮಿ ಚಾಲುಕ್ಯ**

ಈ ಪ್ರದೇಶದಲ್ಲಿ ನೇರವಾಗಿ ಬಾದಾಮಿ ಚಲುಕ್ಯರಿಗೆ ಸಂಬಂಧಿಸಿದ ಶಾಸನಗಳು ದೊರೆಯದೆ ಹೋದರೂ ಪರೋಕ್ಷವಾಗಿ ಅವರ ರಾಜಕೀಯ ಪ್ರಭಾವ ಈ ಪ್ರದೇಶದ ಮೇಲಿದ್ದಿತು. ಇದರಿಂದಾಗಿ ಈ ಪ್ರದೇಶವು ಕದಂಬ ಚಾಲುಕ್ಯರ ಸಾಂಸ್ಕೃತಿಕ ಪ್ರದೇಶವಾಗಿತ್ತು ಎಂದು ಹೇಳಬಹುದು. ಕ್ರಿ.ಶ. ೬ನೇ ಶತಮಾನದ ಆದಿಭಾಗದಿಂದ ಕ್ರಿ.ಶ.೭೫೭ ರವರೆಗೆ ಆಳ್ವಿಕೆ ನಡೆಸಿದ ಇವರು ಕರ್ನಾಟಕ ಇತಿಹಾಸಕ್ಕೆ ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಮಹತ್ತರವಾದ ಕಾಣಿಕೆಗಳನ್ನು ನೀಡಿದ್ದಾರೆ. ಇದೇ ಸಂದರ್ಭದಲ್ಲಿ ದಕ್ಷಿಣದಲ್ಲೂ ಏಳಿಗೆಗೆ ಬಂದ ಕಂಚಿಯ ಪಲ್ಲವರಿಗೂ, ಮಧುರೆಯ ಪಾಂಡ್ಯರಿಗೂ, ಬಾದಾಮಿ ಚಲುಕ್ಯರಿಗೂ ಆಗಾಗ ಘರ್ಷಣೆಗಳು ಸಂಭವಿಸಿದ್ದು, ಪಲ್ಲವರಿಗೂ ಮತ್ತು ಬಾದಾಮಿ ಚಲುಕ್ಯರಿಗೂ ಗಡಿಭಾಗದಲ್ಲಿದ್ದ ಈ ಪ್ರದೇಶವು ಇವರ ಆಡಳಿತಕ್ಕೆ ಒಳಪಟ್ಟಿತ್ತು.[೨೧]

ದಕ್ಷಿಣ ಭಾರತದ ಬಹುಭಾಗವನ್ನು ಆಳಿದ ಬಾದಾಮಿ ಚಾಲುಕ್ಯರು ಚಿತ್ರದುರ್ಗ ಪರಿಸರದಲ್ಲೂ ತಮ್ಮ ಪಾರಮ್ಯವನ್ನು ಮೆರೆದಿದ್ದಾರೆ. ಇದಕ್ಕೆ ಗಂಜಿಗಟ್ಟೆ ಗ್ರಾಮದ ರಂಗಪ್ಪನ

ಗುಡ್ಡದಲ್ಲಿರುವ ಭೀಮೇಶ್ವರ ದೇಗುಲದ ಬಳಿಯ ಶಾಸನವು ಸಾಕ್ಷ್ಯವಾಗಿದೆ. ಶಾಸನಾಂತ್ಯದಲ್ಲಿ ಬಂದಿರುವ ಶ್ರೀ ಬಿಜಾಬೆ ಎಂಬುದು ಶ್ರೀ ವಿಜಯಬ್ಬೆ ಎಂಬ ಸ್ತ್ರೀ ನಾಮದ ಇನ್ನೊಂದು ರೂಪವೇ ಆಗಿರುವುದು ಸ್ಪಷ್ಟ. ಶಾಸನದ ನಮ್ಮ ಮರುಪರಿಶೀಲನೆ ಇಲ್ಲಿ ಒಂದು ಗಮನಾರ್ಹ ಸಂಗತಿಯನ್ನು ಕಾಣುವಲ್ಲಿಗೆ ನಮ್ಮನ್ನು ಕೊಂಡುಯ್ಯುತ್ತದೆ. ಇದು ಈ ಶಾಸನದ ಪಾಠ ರಚಿಸಿಕೊಟ್ಟ ಸ್ತ್ರೀಯ ಹೆಸರಾಗಿರುವಂತೆ ತೋರುತ್ತದೆ. "ನಮ್ಮ ನಾಡಿನಲ್ಲಿ ಈವರೆಗೆ ಅನೇಕ ಸಹಸ್ರ ಸಂಖ್ಯೆಯ ಶಿಲಾ ಹಾಗೂ ತಾಮ್ರ ಶಾಸನಗಳು ಪ್ರಕಟವಾಗಿವೆ. ಕೆಲವು ಶಾಸನಗಳಲ್ಲಿ ಅವುಗಳನ್ನು ರಚಿಸುವವರ, ಶಾಸನ ಕೆತ್ತಲು ಅಕ್ಷರಗಳನ್ನು ಸುಂದರವಾಗಿ ಬರೆದು ಕೊಟ್ಟ ಲಿಪಿಕಾರರ, ಆ ಅಕ್ಷರಗಳನ್ನು ಕೆತ್ತಿದ ರೂವಾರಿಗಳ ಹೆಸರುಗಳು ದೊರೆಯುತ್ತವೆ. ಈವರೆಗೆ ದೊರೆತಿರುವ ಅಂತಹ ಹೆಸರುಗಳೆಲ್ಲ ಕೇವಲ ಪುರಷರವು ಮಾತ್ರ. ಅಪವಾದಕ್ಕೆಂದು ಶಾಸನವನ್ನು ರಚಿಸಿರುವ ಒಬ್ಬ ಸ್ತ್ರೀಯ ನಿದರ್ಶನವೂ ಈವರೆಗೆ ಕಾಣಸಿಕ್ಕಿಲ್ಲ–ಹೀಗೆಂದು ವಿದ್ವಾಂಸರ ಅಭಿಪ್ರಾಯ. "ಹಿಂದಯೇ ಬಿ.ಎಲ್.ರೈಸ್ ಅವರು ಇಲ್ಲಿರುವ ಪಾಠವನ್ನು ಶ್ರೀ ಬಿಜಾಬೆ ಎಂದು ಸರಿಯಾಗಿ ಕಂಡುಕೊಂಡಿದ್ದರಾದರೂ ಅದು ಶಾಸನಕಾರ್ತಿಯಾದ ಮಹಿಳೆಯೊಬ್ಬಳ ಹೆಸರೆಂಬುದನ್ನು ಅವರು ಗುರ್ತಿಸಿರಲಿಲ್ಲ. ಹೀಗಾಗಿ ಸ್ತ್ರೀಯೊಬ್ಬಳು ರಚಿಸಿರುವುದಾಗಿ ಮೊತ್ತಮೊದಲ ಬಾರಿಗೆ ತಿಳಿದುಬರುತ್ತದೆ. "ಸುಮಾರು ೧೨೦೦–೧೩೦೦ ವರ್ಷಗಳಷ್ಟು ಹಿಂದಯೇ ಮಹಿಳೆಯೊಬ್ಬಳು ಶಿಲಾಶಾಸನದ ಪಾಠವನ್ನು ರಚಿಸಿ ಕೊಟ್ಟಿದ್ದಳೆನ್ನುವುದನ್ನು ಬೆಳಕಿಗಿಡುವ ಹೆಮ್ಮೆ ಚಿತ್ರದುರ್ಗ ಜಿಲ್ಲೆಗೆ, ಅಷ್ಟೇ ಏಕೆ, ಇಡೀ ಕರ್ನಾಟಕಕ್ಕೆ ಇದರಿಂದ ಸಲ್ಲಬೇಕಾಗಿದೆ."

ಇದರ ವಿಶೇಷತೆ ಇಲ್ಲಿಗೇ ನಿಲ್ಲುವುದಿಲ್ಲ. "ಈ ಶ್ರೀ ಬಿಜಾಬೆ ಅಥವಾ ಶ್ರೀ ವಿಜಯಬ್ಬೆ ಯಾವ ಊರಿನವಳು? ಚಿತ್ರದುರ್ಗದವಳೇ, ಹೇಗೆ" ಎಂಬ ಪ್ರಶ್ನೆಯೂ ಬರುತ್ತದೆ. ಈ ಸಂದರ್ಭದಲ್ಲಿ ವಿಜ್ಜಿಕಾ, ವಿಜಯಾಂಕ, ವಿಜಯಭಟ್ಟಾರಿಕಾ, ವಿಜಯಮಹಾದೇವಿ ಎಂಬುದಾಗಿ ಕರೆಯಲ್ಪಟ್ಟ ಆ ಕಾಲದ ಪ್ರಖ್ಯಾತ ಮಹಿಳೆಯೊಬ್ಬಳು ನೆನಪಿಗೆ ಬರುತ್ತಾಳೆ. ಅವಳು ಚಾಲುಕ್ಯ ವಕ್ರವರ್ತಿ ಇಮ್ಮಡಿ ಪುಲಕೇಶಿಯ ಮಗ ಚಂದ್ರಾದಿತ್ಯನ (ಕ್ರಿ.ಶ.೬೫೫ ಮತ್ತು ೬೫೮) ರಾಣಿ. ಚಂದ್ರಾದಿತ್ಯನು ಕೊಂಕಣದಲ್ಲಿದ್ದ. "ವಿಜಯ ಭಟ್ಟಾರಿಕೆ ತನ್ನ ಪತಿ ರಾಜಧಾನಿಯಲ್ಲಿಲ್ಲದಿದ್ದಾಗ ಕೆಲಕಾಲ ರಾಜ್ಯಭಾರ ನಡೆಸಿದಂತೆ ಉಲ್ಲೇಖವಿದೆ. ಸಂಸ್ಕೃತ ಸಾಹಿತ್ಯದಲ್ಲಿ 'ಕೌಮುದೀ ಮಹೋತ್ಸವ' ವೆಂಬ ಸುಪ್ರಸಿದ್ಧ ಐತಿಹಾಸಿಕ ಕಾವ್ಯದ ಕರ್ತೃವಾದ ವಿಜ್ಜಿಕಾ ಎಂಬುವಳು ವಿಜಯಭಟ್ಟಾರಿಕೆಯೇ ಎಂದು ಕೆಲವು ವಿದ್ವಾಂಸರ ಅಭಿಪ್ರಾಯ. ಅವಳು 'ಸರಸ್ವತಿ' ಎಂಬ ಪ್ರಶಂಸೆಗೂ ಪಾತ್ರಳಾಗಿದ್ದವಳೇ. ಸಂಸ್ಕೃತದ ಪ್ರಖ್ಯಾತ ಕವಿ ಹಾಗೂ ಕಾವ್ಯಶಾಸ್ತ್ರಕಾರನಾಗಿದ್ದ ದಂಡಿ ಸರಸ್ವತಿಯನ್ನು "ಸರ್ವಶುಕ್ಲಾ ಸರಸ್ವತೀ" ಎಂದು ವರ್ಣಿಸಿದ್ದು ವ್ಯರ್ಥ ಎಂದು ಲೇವಡಿ ಮಾಡುವಷ್ಟು ಅಭಿಮಾನಶೀಲವಾದ ಸ್ತ್ರೀತತ್ವವನ್ನು ಹೊಂದಿದ್ದವಳು ಅವಳು. ಅವಳು ದೇವದಾಸಿಯರ ಕುಟುಂಬದಿಂದ ಬೇರೆ ಬಂದವಳು. ಕಪ್ಪು ಬಣ್ಣದವಳು. ಹಾಗಿದ್ದೂ ಚಕ್ರವರ್ತಿಯ ಸೊಸೆಯಾಗಿ ಚಕ್ರವರ್ತಿಪುತ್ರನ ಹೆಂಡತಿಯಾಗುವಂತಹ ವಿಶೇಷ ಅರ್ಹತೆಯನ್ನು ಹೊಂದಿದ್ದಳು. ಈ ವಿಜಯ ಭಟ್ಟಾರಿಕೆಯೇ ಮೇಲೆ ಹೇಳಿದ ಶಾಸನದ

ಕರ್ತೃ ಆಗಿರಬಹುದೆ? ಅವಳು ಮೂಲತಃ ಸೂಳ್ಗಲ್ಲಿನವಳೆ? ಇಲ್ಲಿಂದ ಚಾಲುಕ್ಯ ರಾಜಧಾನಿಗೆ ಹೋಗಿದ್ದಿರಬಹುದೆ? ಇದು ನಿಜವಾದರೆ ಈ ಶಾಸನದ ಪ್ರಾಶಸ್ತ್ಯ ಇನ್ನಷ್ಟು ಹೆಚ್ಚುವುದಲ್ಲದೆ, ಅವಳು ಮತ್ತು ಅವಳ ಮೂಲಕ ಚಾಲುಕ್ಯ ರಾಜವಂಶ ಚಿತ್ರದುರ್ಗದೊಂದಿಗೆ ಹೊಂದಿದ್ದ ಸಂಬಂಧ ವಿಶೇಷವಾಗಿದದ್ದೆಂಬ ಊಹನೆಗೆ ಅವಕಾಶ ಒದಗುತ್ತದೆ.[೨೨] ಇವುಗಳ ಆಧಾರದಿಂದ ಪ್ರಸ್ತುತ ಅಧ್ಯಯನ ಪ್ರದೇಶವು ಇವರ ಆಳ್ವಿಕೆಗೆ ಒಳಪಟ್ಟತ್ತೆಂದು ತಿಳಿಯಬಹುದಾಗಿದೆ.

## ರಾಷ್ಟ್ರಕೂಟ

ಬಾದಾಮಿ ಚಲುಕ್ಯರ ನಂತರ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ರಾಷ್ಟ್ರಕೂಟರು ಬಲಿಷ್ಠ ರಾಜಮನೆತನದವರಾಗಿದ್ದರು. ಸುಮಾರು ೨ನೇ ಶತಮಾನಗಳ ಕಾಲ ವಿಶಾಲ ಸಾಮ್ರಾಜ್ಯವನ್ನಾಳಿದ ರಾಷ್ಟ್ರಕೂಟರು ಕರ್ನಾಟಕದ ಇತಿಹಾಸದಲ್ಲಿ ಪ್ರಸಿದ್ಧರಾಗಿದ್ದಾರೆ. ಇವರು ಸಹ ಚಲುಕ್ಯರಂತೆ ಉತ್ತಮ ಹಾಗೂ ನೊಳಂಬರೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿದ್ದು, ಕರ್ನಾಟಕ ಸಂಸ್ಕೃತಿಗೆ ಪ್ರಮುಖ ಕೊಡುಗೆಗಳನ್ನು ನೀಡಿದ್ದಾರೆ. ಎಪಿಗ್ರಾಫಿಯ ಕರ್ನಾಟಿಕ ಸಂಪುಟ ಹನ್ನೊಂದರಲ್ಲಿ ಇವರ ಕಾಲದ ಅನೇಕ ಶಾಸನಗಳು ಪ್ರಕಟಗೊಂಡಿವೆ. ಇವುಗಳಲ್ಲಿ ಎರಡನೆಯ ಗೋವಿಂದ, ಎರಡನೇ ಕೃಷ್ಣ, ಎರಡನೇ ಅಮೋಘವರ್ಷ, ಮೂರನೇ ಕೃಷ್ಣ ಹಾಗೂ ಮೂರನೇ ಕರ್ಕನ ಶಾಸನಗಳಲ್ಲಿ ಮೊದಲನೆಯದು ಎರಡೆನೇ ಗೋವಿಂದನಿಗೆ ಸಂಬಂಧಿಸಿದ್ದು, ಈತನನ್ನು ಜಗತ್ತುಂಗ, ಪ್ರಭೂತವರ್ಷ, ಪ್ರತಾಪಲೋಕ ಮತ್ತು ಶ್ರೀವಲ್ಲಭ ಎಂಬುದಾಗಿ ಹೊಗಳಲಾಗಿದೆ.

ಚಿತ್ರದುರ್ಗ ತಾಲೂಕು ಇಸಾಮುದ್ರ ಗ್ರಾಮದಲ್ಲಿ ದೊರೆತಿರುವ ಶಾಸನವು ಕ್ರಿ.ಸ.೯೩೩ ರಲ್ಲಿ ರಚನೆಗೊಂಡಿದ್ದು, ರಾಷ್ಟ್ರಕೂಟರ ವಂಶಾವಳಿಯನ್ನು ನೀಡುತ್ತದೆ. ಇಸಾಮುದ್ರದಲ್ಲಿರುವ ಮತ್ತೆರಡು ಶಾಸನಗಳು ರಾಷ್ಟ್ರಕೂಟ ಅರಸರ ಎರಡನೇ ಅಮೋಘವರ್ಷನಿಗೆ ಸೇರಿದ್ದಾಗಿದೆ. ಈ ಪ್ರದೇಶದಲ್ಲಿ ಕನ್ನರ್ಯ್ಯ ಎಂಬ ಅರಸನು ಆಳ್ವಿಕೆ ನೆಡೆಸುತ್ತಿದ್ದನು ಎನ್ನು ವಿಷಯ ಪ್ರಸ್ತಾಪವಾಗುತ್ತದೆ. ಹಾಗೆಯೇ ಈ ಪ್ರದೇಶದಲ್ಲಿ ಅಣ್ಣಿಗ ಅಣ್ಣಯ್ಯನು ಆಳುತ್ತಿದ್ದನು. ಈತನಿಗೆ ಬೀರನೊಳಂಬ ಎನ್ನುವ ಬಿರುದು ಇದ್ದಿತು. ರಾಷ್ಟ್ರಕೂಟ ಮೂರನೇ ಕೃಷ್ಣನ ಅನೇಕ ಶಾಸನಗಳು ಈ ಪ್ರದೇಶಕ್ಕೆ ಹೊಂದಿಕೊಂಡಂತೆ ದೊರೆಯುತ್ತವೆ.[೨೨] ಹೀಗೆ ರಾಷ್ಟ್ರಕೂಟ ಅರಸರಿಗೆ ಸಂಬಂಧಿಸಿದ ಅನೇಕ ಶಾಸನಗಳು ತಮಟಕಲ್ಲು ಪರಿಸರದಲ್ಲಿ ದೊರೆಯದೇ ಇದ್ದರೂ ಇದರ ಸುತ್ತಮುತ್ತಲಿನ ಪ್ರದೇಶದಲ್ಲಿ ರಾಷ್ಟ್ರಕೂಟರಿಗೆ ಸಂಬಂಧಿಸಿದ ಶಾಸನಗಳು ದೊರೆತಿವೆ.

## ಕಲ್ಯಾಣ ಚಾಲುಕ್ಯರು

ಕಲ್ಯಾಣದ ಚಾಲುಕ್ಯರು ಸುಮಾರು ಕ್ರಿ.ಶ. ೧೦ನೇ ಶತಮಾನದಿಂದ ೧೨ನೇ ಶತಮಾನದವರೆಗೆ ದಕ್ಷಿಣ ಭಾರತದ ಇತಿಹಾಸದಲ್ಲಿ ವಿಶೇಷವಾಗಿ ಕರ್ನಾಟಕ ಇತಿಹಾಸದಲ್ಲಿ ಮಹತ್ತರವಾದ ಪಾತ್ರ ವಹಿಸಿದ್ದಾರೆ. ಕರ್ನಾಟಕದುದ್ದಕ್ಕೂ ಆಳ್ವಿಕೆ ನಡೆಸಿ ಹಲವಾರು

ದೇವಾಲಯಗಳನ್ನು ನಿರ್ಮಿಸಿದ್ದಾರೆ. ಅಲ್ಲದೆ ದಾನದತ್ತಿಗಳನ್ನು ಯುದ್ಧದ ಸನ್ನಿವೇಶಗಳನ್ನು ವಿವರಿಸುವಂತಹ ಅನೇಕ ಶಾಸನಗಳನ್ನು ರಚಿಸಿದ್ದಾರೆ.

ಕಲ್ಯಾಣದ ಚಾಲುಕ್ಯರಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಪಡೆದ ಅರಸರಗಳೆಂದರೆ ಎರಡನೇ ಜಯಸಿಂಹ, ಸೋಮೇಶ್ವರ, ವಿಕ್ರಮಾದಿತ್ಯ, ಇತ್ಯಾದಿ ಅರಸರು ಕಲ್ಯಾಣದ ಚಾಲುಕ್ಯರಿಗೆ ಸಂಬಂಧಿಸಿದ ಶಾಸನಗಳು ಮತ್ತು ವೀರಗಲ್ಲುಗಳು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ವಿರಳವಾಗಿದ್ದರೂ ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ಇವರ ಆಳ್ವಿಕೆಯ ನಂಟು ಇದ್ದದು ಸ್ಪಷ್ಟವಾಗುತ್ತದೆ.[೨೩]

**ನೊಳಂಬ**

ಕರ್ನಾಟಕದಲ್ಲಿ ಕ್ರಿ.ಶ.೮ನೇ ಶತಮಾನದಿಂದ ೧೧ ನೇ ಶತಮಾನದವರೆಗೆ ಆಡಳಿತ ನಡೆಸಿದ ನೊಳಂಬರು ದಕ್ಷಿಣ ಭಾರತದ ಇತಿಹಾಸದಲ್ಲಿ ಬಹುಮುಖ್ಯ ಪಾತ್ರವಹಿಸಿದ್ದರು. ಇವರ ರಾಜಧಾನಿ ಈಗಿನ ಆಂದ್ರಪ್ರದೇಶದ ಮಡಕಶಿರ ತಾಲೂಕಿನ ಹೆಂಜೇರು ಅಥವಾ ಹೇಮಾವತಿಯಾಗಿತ್ತು. ಆ ನಂತರ ಕ್ರಿ.ಶ. ೧೧ನೇ ಶತಮಾನದಲ್ಲಿ ಇವರು ತಮ್ಮ ರಾಜಧಾನಿಯನ್ನು ತುಂಗಾಭದ್ರ ತೀರದಲ್ಲಿರುವ ಕಂಪಲಿಗೆ ವರ್ಗಾಯಿಸಿಕೊಂಡರು. ಪ್ರಾರಂಭದಲ್ಲಿ ನೊಳಂಬರಿಗೆ ಸಾಸಿರವೆಂಬ ಸಣ್ಣ ಪ್ರಾಂತ್ಯದ ಮೇಲೆ ಆಡಳಿತ ನಡೆಸಿದ್ದರು. ಈ ಪ್ರಾಂತ್ಯವು ಈಗಿನ ಚಿತ್ರದುರ್ಗ ಜಿಲ್ಲೆ ಮತ್ತು ಅದರ ಸುತ್ತಮುತ್ತಲಿನ ಪ್ರದೇಶವನ್ನೊಳಗೊಂಡಿತ್ತು. ಕಾಲಕ್ರಮೇಣ ಅಂದರೆ ಕ್ರಿ.ಶ.೯-೧೦ನೇ ಶತಮಾನದಲ್ಲಿ ಇವರ ಪ್ರಾಬಲ್ಯವು ವೃದ್ಧಿಸಿ ಇವರ ರಾಜ್ಯವು ವಿಸ್ತಾರಗೊಂಡು ನೊಳಂಬವಾಡಿ ೨೬೦೦ ಎಂದು ವಿಸ್ತಾರವಾದ ಪ್ರಾಂತ್ಯವಾಯಿತು. ಈ ಪ್ರಾಂತ್ಯವು ಕರ್ನಾಟಕದ ಚಿತ್ರದುರ್ಗ, ತುಮಕೂರು, ಕೋಲಾರ ಮತ್ತು ಅದಕ್ಕೆ ಸೇರಿದಂತಿರುವ ಸುತ್ತಮುತ್ತಲಿನ ಪ್ರದೇಶಗಳು ವ್ಯಾಪಿಸಿತು.[೨೪]

ಚಿತ್ರದುರ್ಗ ಜಿಲ್ಲೆಯಲ್ಲಿ ಹಿರಿಯೂರು, ಚಳ್ಳಕೆರೆ ತಾಲೂಕುಗಳಲ್ಲಿ ಕ್ರಿ.ಶ.೮೧೫ ನೊಳಂಬರು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ್ದಾರೆ. ಚಿಕ್ಕಮಧುರೆಯ ಶಾಸನವು ಸಿಂಹಪೋತನ ಮಗ ಪಲ್ಲವಾದಿ ರಾಜ ಮತ್ತು ಅವನ ಮಗ ಪಲ್ಲವಮಲ್ಲ ರಾಷ್ಟ್ರಕೂಟರ ಸಾಮಂತರಾಗಿ ಆಡಳಿತ ನಡೆಸುತ್ತಿದ್ದುದು ತಿಳಿಸುತ್ತದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಹಲವು ಶತಮಾನಗಳವರೆಗೆ ವೈಭವದಿಂದ ಆಳಿದ ನೊಳಂಬರು ಕರ್ನಾಟಕದ ಸಾಮಂತ ರಾಜಮನೆತನಗಳಲ್ಲಿ ಮಹತ್ವದ ಸ್ಥಾನ ಪಡೆದಿದ್ದರು. ಇವರ ಆಳ್ವಿಕೆ ಪ್ರಸ್ತುತ ಪ್ರದೇಶಕ್ಕೆ ಸೀಮಿತವಾಗಿರದೇ ಸುತ್ತಮುತ್ತಲಿನ ಜಿಲ್ಲೆಗಳಿಗೂ ವಿಸ್ತರಿಸಿದ್ದಿತು ಎನ್ನುವ ಸಂಗತಿ ದೊರೆತಿರುವ ಶಾಸನಗಳ ಆಧಾರಗಳಿಂದ ತಿಳಿದುಕೊಳ್ಳಬಹುದಾಗಿದೆ. ಅದರಂತೆ ಚಿತ್ರದುರ್ಗ ಪರಿಸರಕ್ಕೆ ಹತ್ತಿರವಿರುವ ತಮಟಕಲ್ಲು ಪ್ರದೇಶವು ಇವರ ಆಡಳಿತಕ್ಕೆ ಒಳಪಟ್ಟಿತ್ತು ಎಂದು ತಿಳಿಯಬಹುದಾಗಿದೆ.

ಹೊಯ್ಸಳರು

ಕರ್ನಾಟಕ ರಾಜಮನೆತನಗಳಲ್ಲಿ ಹೊಯ್ಸಳರ ಸ್ಥಾನ ಮಹತ್ತರವಾದದು. ಸುಮಾರು ಕ್ರಿ.ಶ.೧೨ನೇ ಶತಮಾನದಲ್ಲಿ ಆದಿಭಾಗದಿಂದ ಕ್ರಿ.ಶ. ೧೪ನೇ ಶತಮಾನದ ಮಧ್ಯಭಾಗದವರೆಗೆ ಆಳ್ವಿಕೆ ನಡೆಸಿದ ಇವರು ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ಸಾಹಿತ್ಯಿಕ, ಕಲೆ, ಮತ್ತು ವಾಸ್ತುಶಿಲ್ಪಕ್ಕೆ ಅತ್ಯಂತ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುವುದರ ಮೂಲಕ ವಿಶಿಷ್ಟ ರೀತಿಯ ಕಾಣಿಕೆಗಳನ್ನು ಸಲ್ಲಿಸಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಹೊಯ್ಸಳರ ಆಳ್ವಿಕೆಯನ್ನು ತಿಳಿಯಲು ಸುಮಾರು ಐವತ್ತಕ್ಕೂ ಹೆಚ್ಚು ಶಾಸನಗಳು ದೊರೆತಿವೆ. ಅವುಗಳ ಆಧಾರದಿಂದ ಹೊಯ್ಸಳರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಇಡೀ ಜಿಲ್ಲೆಯನ್ನು ಆಕ್ರಮಿಸಿಕೊಂಡಿದ್ದು ಸುತ್ತಮುತ್ತಲಿನ ಪ್ರದೇಶಗಳಲ್ಲಿಯೂ ಆಳ್ವಿಕೆ ನೆಡೆಸಿರುವುದು ತಿಳಿದುಬರುತ್ತದೆ. ಅದರಂತೆ ಪ್ರಸ್ತುತ ಪ್ರದೇಶವು ಕೂಡ ಇವರ ಆಡಳಿತಕ್ಕೆ ಒಳಪಟ್ಟಿತ್ತೆಂದು ತಿಳಿಯಬಹುದು.

**ಸೇವುಣರು**

ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಕದಂಬ, ಚಾಲುಕ್ಯರು, ರಾಷ್ಟ್ರಕೂಟರ ಮನೆತನಗಳಂತೆ ದೇವಗಿರಿಯ ಸೇವುಣರು ಕೆಲವು ಕಾಲ ಇಲ್ಲಿ ಆಳ್ವಿಕೆ ನಡೆಸಿದ್ದಾರೆ ಎನ್ನುವುದು ತಿಳಿದುಬರುತ್ತದೆ. ಇವರಿಗೆ ಸಂಬಂಧಿಸಿದ ಶಾಸನಗಳು ದೊರೆಯದೇ ಇದ್ದರೂ ಚಿತ್ರದುರ್ಗ ಜಿಲ್ಲೆಯಾದ್ಯಂತ ದೊರೆತಂತಹ ಶಾಸನಗಳ ಆಧಾರದಿಂದ ಈ ಪ್ರದೇಶವು ಸೇವುಣರಿಗೆ ಸಂಬಂಧಿಸಿದ್ದಾಗಿತ್ತೆಂದು ಹೇಳಬಹುದು. ಸೇವುಣರು ಆಳ್ವಿಕೆಯ ಅವಧಿಯಲ್ಲಿ ಇತರ ರಾಜ ಮನೆತನಗಳೊಂದಿಗೆ ಇಟ್ಟುಕೊಂಡಿದ್ದ ಸಂಬಂಧಗಳು ಮತ್ತು ಇತ್ಯಾದಿಗಳ ಬಗ್ಗೆ ಅವರ ಶಾಸನಗಳಿಂದ ತಿಳಿದುಕೊಳ್ಳಬಹುದಾಗಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಅವರ ರಾಜಕೀಯ ಮತ್ತಿತರ ವಿವರಗಳ ತಿಳಿಯಬಹುದಾಗಿದೆ. ಈ ಜಿಲ್ಲೆಯ ಕೆಲವು ಭಾಗಗಳಲ್ಲಿ ಇವರ ರಾಜಕೀಯ ಮತ್ತಿತರ ವಿವರಗಳ ಬಗ್ಗೆ ತಿಳಿಯಲು ಸುಮಾರು ೨೦ ಶಾಸನಗಳು ದೊರೆತಿವೆ. ಈ ಜಿಲ್ಲೆಯ ಕೆಲವು ಭಾಗಗಳು ಇವರ ಅಧೀನಕ್ಕೆ ಒಳಪಟ್ಟಿವೆ ಎಂದು ಈ ಶಾಸನಗಳ ಸಹಾಯದಿಂದ ಸ್ಪಷ್ಟಪಡಿಸಬಹುದು. ಅದರಂತೆ ಚಿತ್ರದುರ್ಗ ಅಂತರದಲ್ಲಿರುವ ತಮಟಕಲ್ಲು ಪ್ರದೇಶವು ಇವರ ವ್ಯಾಪ್ತಿಗೆ ಸೇರಿತ್ತೆಂದು ಹೇಳಬಹುದಾಗಿದೆ.

**ವಿಜಯನಗರ**

ಹೊಯ್ಸಳ ಸಾಮ್ರಾಜ್ಯ ಪತನ ಹೊಂದಿದ ತರುವಾಯು ವಿಜಯನಗರ ಸಾಮ್ರಾಜ್ಯವು ಅಸ್ತಿತ್ವಕ್ಕೆ ಬಂದಿತು. ಇದನ್ನು ಮರೆತು ಹೋದ ಹಾಗೂ ಮರೆಯಲಾಗದ ಸಾಮ್ರಾಜ್ಯವೆಂದು ಇತಿಹಾಸಕಾರರು ಬಣ್ಣಿಸಿದ್ದಾರೆ. ಹದಿನಾರನೇ ಶತಮಾನದಲ್ಲಿ ಅಸ್ತಂಗತವಾದ ವಿಜಯನಗರವು ಇಡೀ ಭಾರತದಲ್ಲಿ ಮಾತ್ರವಲ್ಲದೇ ಪ್ರಪಂಚದಲ್ಲಿಯೇ ಖ್ಯಾತಿ ಪಡೆದಿತ್ತು. ಕ್ರಿ.ಶ.೧೩೩೬ ರಿಂದ ೧೫೬೫ ರವರೆಗೆ ಆಳ್ವಿಕೆ ನಡೆಸಿದ ವಿಜಯನಗರದ ಅರಸರು ಚಿತ್ರದುರ್ಗ ಜಿಲ್ಲೆಯನ್ನು ತಮ್ಮ

ವಿಭಾಗಗಳನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಅರಸರು ಅನೇಕ ವಿಭಾಗಗಳನ್ನು ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದರು. ಈ ವಿಭಾಗಗಳು ಮೊದಲನೆಯ ಬುಕ್ಕನ ಕಾಲದಿಂದಲೇ ಇದ್ದವು ಎಂಬುದಕ್ಕೆ ಹಲವು ಶಾಸನಗಳು ಆಧಾರಗಳಿವೆ. ವಿಜಯನಗರದ ಅರಸರು ಕ್ರಮಬದ್ಧವಾದ ಆಡಳಿತ ನಡೆಸಿರುವುದರ ಜೊತೆಗೆ ಕೃಷಿ ಅಭಿವೃದ್ಧಿಗೆ ದೇವಾಲಯಗಳ ಜೀರ್ಣೋದ್ಧಾರಕ್ಕೆ ದಾನದತ್ತಿಗಳನ್ನು ನೀಡಿದ ಬಗ್ಗೆ ಶಾಸನಗಳಿಂದ ತಿಳಿಯಬಹುದಾಗಿದೆ

ಈ ರೀತಿಯಾಗಿ ವಿಜಯನಗರದ ಅರಸರು ಸಹ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ನೇರ ಆಳ್ವಿಕೆ ನಡೆಸದಿದ್ದರೂ ಇವರ ಸಾಮಾಂತರಾಗಿ ಚಿತ್ರದುರ್ಗ ಪಾಳೆಗಾರರು ಆಳ್ವಿಕೆ ನಡೆಸಿದರು. ಚಿತ್ರದುರ್ಗ ಪಾಳೆಗಾರರು ಹೊರಡಿಸಿದ ಶಾಸನಗಳಲ್ಲಿ ಹಾಗೂ ಹರ್ತಿಕೋಟೆಯ ಪಾಳೆಗಾರರು ಹೊರಡಿಸಿರುವ ಶಾಸನಗಳಲ್ಲಿ ಭಾಷೆಗೆ ತಪ್ಪುದರಾಯರ ಗಂಡ ಎಂಬ ವಾಕ್ಯದಿಂದ ಇವರು ವಿಜಯನಗರದ ಅರಸರ ಮತ್ತು ಸಂಗಮ ವಂಶದ ಮೊದಲನೇ ದೊರೆಯಾದ ಹರಿಹರನ ಬಿರುದಾಂಕಿತನಿಂದ ಹರತಿ ಪಾಳೆಗಾರರು ಅರಸರ ಸಾಮಂತರಾಗಿದ್ದರು ಎಂದು ಇತಿಹಾಸಕಾರರು ಆಭಿಪ್ರಾಯಪಟ್ಟಿದ್ದಾರೆ.[೨೫]

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಗ್ರಾಮದ ದಕ್ಷಿಣಕ್ಕಿರು ಬೆಟ್ಟದ ಮುಂಭಾಗದಲ್ಲಿ ಹಲವು ರೀತಿಯ ವರ್ಣಚಿತ್ರಗಳನ್ನು ಕಾಣುತ್ತೇವೆ ಇವುಗಳು ವಿದ್ವಾಂಸರ ಪ್ರಕಾರ ವಿಜಯನಗರ ಮತ್ತು ವಿಜಯನೋತ್ತರ ಕಾಲದ್ದು ಎಂದು ಹೇಳಲಾಗಿದೆ. ಹಾಗಯೇ ಪರಿಸರದಲ್ಲಿ ಕೆಲವು ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳು ಇವರ ಕಾಲಕ್ಕೆ ಸೇರಿದವುಗಳಾಗಿರುವುದರಿಂದ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಇವರ ಆಳ್ವಿಕೆ ಇತ್ತು ಎಂದು ತಿಳಿಯಬಹುದಾಗಿದೆ.

**ಚಿತ್ರದುರ್ಗ ಪಾಳೆಯಗಾರರು**

ಮಧ್ಯಯುಗೀನ ಭಾರತದ ಇತಿಹಾಸದಲ್ಲಿ ಅತ್ಯಂತ ಉನ್ನತವಾದ ಕಾಲಘಟ್ಟವೆಂದರೆ ವಿಜಯನಗರದ ಸಾಮ್ರಾಜ್ಯದ ಕಾಲಾವಧಿ. ಕ್ರಿ.ಶ.೧೪ನೇ ಶತಮಾನದ ಪೂರ್ವಾರ್ಧದಲ್ಲಿ ಏಳಿಗೆಗೆ ಬಂದ ವಿಜಯನಗರ ಅರಸರು ಬಹು ವಿಶಾಲವಾದ ಸಾಮ್ರಾಜ್ಯವನ್ನು ನಿರ್ಮಿಸಿ ಭಾರತದ ಆಚೆ ಕೀರ್ತಿ ಪತಾಕೆಯನ್ನು ಹಾರಿಸಿದರು. ಕ್ರಿ.ಶ.೧೫೬೫ ರಲ್ಲಿ ನಡೆದಂತಹ ರಕ್ಕಸತಂಗಡಿ ಯುದ್ಧದ ನಂತರ ಸಾಮ್ರಾಜ್ಯವು ನಾಶಗೊಂಡ ಸಂದರ್ಭದಲ್ಲಿ ಹಲವಾರು ಆಧೀನ ಪಾಳೆಗಾರರು ಸ್ವತಂತ್ರ ಹೊಂದಿದರು. ವಿಜಯನಗರ ಪತನದ ನಂತರ ಚಿತ್ರದುರ್ಗ ಪಾಳೆಯಗಾರರು ಸ್ವತಂತ್ರವಾಗಿ ಆಳ್ವಿಕೆ ಮಾಡಲು ಪ್ರಾರಂಭಿಸಿದರು.

ಚಿತ್ರದುರ್ಗ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶಗಳನ್ನೊಳಗೊಂಡಂತೆ ಈ ಭಾಗದಲ್ಲಿ ಸುಮಾರು ಏಳು ಪಾಳೆಯಗಾರರ ಮನೆತನಗಳು ಆಳ್ವಿಕೆ ನಡೆಸಿವೆ. ಅಂದರೆ ಹರ್ತಿಕೋಟೆ, ಬೇಲೂರು, ಚಿತ್ರದುರ್ಗ, ಸಂತೆಬೆನ್ನೂರು, ನಾಯಕನಹಟ್ಟಿ, ಮತ್ತಿನಾಡು (ಮತ್ತೋಡು). ಅವರಲ್ಲಿ ಚಿತ್ರದುರ್ಗದ ಪಾಳೆಯಗಾರರು ಪ್ರಮುಖರೆನಿಸಿದ್ದಾರೆ. ಇವರುಗಳ ಬಗ್ಗೆ ಅನೇಕ ಶಿಲಾಶಾಸನ,

ತಾಮ್ರಪಟ ಶಾಸನಗಳು ಇತ್ಯಾದಿ ಆಧಾರಗಳು ದೊರೆತಿವೆ. ಇವರುಗಳು ನಿರ್ಮಿಸಿದ ಮತ್ತು ಜೀರ್ಣೋದ್ಧಾರಗೊಳಿಸಿದ ದೇವಾಲಯಗಳು ಕೋಟೆ ಕೊತ್ತಲಗಳು, ಕೆರೆ ಹಾಗೂ ದತ್ತಿ ಬಿಟ್ಟ ವಿವರಗಳನ್ನು ತಿಳಿಯುಬಹುದು. ಸುತ್ತಮುತ್ತಲಿನ ಪ್ರದೇಶದಲ್ಲಿ ಇವರುಗಳು ಕಟ್ಟಿ ಜೀರ್ಣೋದ್ಧಾರಗೊಳಿಸಿದ ಐತಿಹಾಸಿಕ ಕುರುಹುಗಳನ್ನು ಇಂದಿಗೂ ಕಾಣಬಹುದು. ಚಿತ್ರದುರ್ಗದ ಪಾಳೆಯಗಾರರು ಮೂಲತಃ ಬೇಡ ಜನಾಂಗದವರಾಗಿದ್ದು, ವಾಲ್ಮೀಕಿ ಗೋತ್ರದ ಕಾಮಗೇತಿ ವಂಶಸ್ಥರು. ಇವರು ಆಂಧ್ರಪ್ರದೇಶದ ತಿರುಪತಿ ಬಳಿಯ ಜಡೆಕಲ್ ದುರ್ಗದಿಂದ ವಲಸೆ ಬಂದರೆನ್ನುವುದು ಪ್ರತೀತಿ. ಚಿತ್ರದುರ್ಗವನ್ನು ತಮ್ಮ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ಸುಮಾರು ೨೧೦ ವರ್ಷಗಳಿಗೂ ಹೆಚ್ಚು ಕಾಲ ಆಳ್ವಿಕೆ ನಡೆಸಿದ್ದಾರೆ.[೨] ಚಿತ್ರದುರ್ಗ ಪಾಳೆಯ ಪಟ್ಟನ್ನು ಕಟ್ಟಿದ ಕೀರ್ತಿ ತಿಮಣ್ಣನಾಯಕನಿಗೆ ಸಲ್ಲುತ್ತದೆ. ಈತನ ಆಡಳಿತದ ಕಾಲದಿಂದ ನಮಗೆ ಶಾಸನಗಳು ದೊರೆಯುತ್ತವೆ. ಕ್ರಿಶ ೧೫೬೮ರ ಹೊಳಲ್ಕೆರೆ ಶಾಸನವು ವೀರಪ್ರತಾಪ ಸದಾಶಿವರಾಯ ಮಹಾರಾಯನಿಗೆ ಸಂಬಂಧಿಸಿದ್ದಾಗಿದೆ. ಅಳಿಯ ರಾಮರಾಯನ ಆಳ್ವಿಕೆಯ ಕಾಲದಲ್ಲಿ ತಿರುಮಲರಾಯನು ಹೊಳಲ್ಕೆರೆ ಸೀಮೆಯನ್ನು ಕಾಮಗೇತಿ ಕಸ್ತೂರಿ ಮದಕರಿನಾಯಕನಿಗೆ ನೀಡಿದನು ಎಂಬ ವಿವರ ನೀಡುತ್ತದೆ. ತಿಮ್ಮಣ್ಣನಾಯಕನ ನಂತರ ಈತನ ಮಗನಾದ ಒಬಣ್ಣನಾಯಕ ಅಧಿಕಾರಕ್ಕೆ ಬಂದನು. ನಂತರ ಕ್ರಿ.ಶ.೧೬೦೨ ರಲ್ಲಿ ಒಬಣ್ಣ ನಾಯಕನ ತರುವಾಯು ಆತನ ಮಗನಾದ ಕಸ್ತೂರಿ ರಂಗಪ್ಪನಾಯಕನು ಅಧಿಕಾರಕ್ಕೆ ಬಂದನು. ಈತನು ಕ್ರಿ.ಶ. ೧೬೦೨ ರಿಂದ ೧೬೫೨ ರವರೆಗೆ ಸುಮಾರು ಐವತ್ತು ವರ್ಷಗಳ ಕಾಲ ಆಳ್ವಿಕೆ ನೆಡೆಸುವುದರ ಮೂಲಕ ಸಂಸ್ಥಾನವನ್ನು ವಿಸ್ತರಿಸಿದ. ಈ ಹಿನ್ನಲೆಯಲ್ಲಿ ಈತನು ತನ್ನ ಸುತ್ತಮುತ್ತಲು ಪಾಳೆಯಗಾರರೊಂದಿಗೆ ಹಲವಾರು ಯುದ್ಧಗಳನ್ನು ಮಾಡಬೇಕಾಯಿತು. ಬಸವಪಟ್ಟಣದ ಪಾಳೆಯಗಾರರೊಂದಿಗೆ ಯುದ್ಧವನ್ನು ಮಾಡುವುದರ ಮೂಲಕ ಮಾಯಕೊಂಡ, ಸಂತೆಬೆನ್ನೂರು, ಹೊಳಲ್ಕೆರೆ, ಅಣಜಿ, ಜಗಳೂರು ಮತ್ತಿತರ ಪ್ರದೇಶಗಳನ್ನು ರಾಜ್ಯಕ್ಕೆ ಸೇರಿಸಿಕೊಂಡನು. ಕ್ರಿ.ಶ.೧೬೫೨ ರಲ್ಲಿ ರಂಗಪ್ಪನಾಯಕನು ಮರಣ ಹೊಂದಿದನು. ನಂತರ ಎರಡನೇ ಮದಕರಿನಾಯಕನು ಅಧಿಕಾರಕ್ಕೆ ಬಂದನು. ನಂತರ ಬಿಚ್ಚುಗತ್ತಿ ಭರಮಣ್ಣನಾಯಕನು ಅಧಿಕಾರಕ್ಕೆ ಬಂದನು ಇವನು ಕ್ರಿ.ಶ ೧೭೨೧-೧೭೪೯ ರವರೆಗೆ ಸುಮಾರು ಇಪ್ಪತೊಂಭತ್ತು ವರ್ಷಗಳ ಕಾಲ ಆಳ್ವಿಕೆ ನೆಡೆಸಿದನು. ಇವನ ನಂತರ ಚಿತ್ರದುರ್ಗದ ಪ್ರಮುಖ ದೊರೆಯಾಗಿ ರಾಜವೀರ ಮದಕರಿನಾಯಕನು ಅಧಿಕಾರಕ್ಕೆ ಬಂದನು. ಇವನು ಕ್ರಿ.ಶ ೧೭೫೪-೧೭೭೯ ರವರೆಗೆ ಸುಮಾರು ೨೫ ವರ್ಷಗಳ ಕಾಲ ಆಳ್ವಿಕೆ ನೆಡೆಸಿದ ಕೊನೆಯ ಕೊನೆಯ ನಾಯಕನಾಗಿದ್ದಾನೆ.

ಪ್ರಸ್ತುತ ಪ್ರದೇಶದಲ್ಲಿ ಪಾಳೆಯಗಾರರ ಕಾಲದಲ್ಲಿ ಚಿತ್ರದುರ್ಗ ಕೋಟೆಯೊಳಗ್ ಬರು ಸೈನಿಕರನ್ನು ದೂರದಿಂದಲೇ ತಡೆಯುವಂತೆ ದರ್ಗದ ಸುತ್ತಲೂ ಕೋಟೆಯಂತೆ ಹಬ್ಬಿರುವ ಕೋಣೆಗಳಿಗೆ ವಿಶೇಷವಾದ ರಕ್ಷಣಾವ್ಯವಸ್ಥೆಯನ್ನು ಮಾಡಲಾಯಿತು. ಇಂಗಳದಾಳ್, ಕುಂಚಿಗನಾಳ್,

ಮದಕರಿಪುರ, ಗೋನೂರು, ಗುಡ್ಡದರಂಗವ್ವನಹಳ್ಳಿ, ಜೊತೆಗೆ ತಮಟಕಲ್ಲು ಸಹ ರಕ್ಷಣಾಪಡೆಯ ಕೇಂದ್ರವಾಗಿತ್ತು.

ಪ್ರಸ್ತುತ ಅಧ್ಯಯನ ಕ್ಷೇತ್ರವಾದ ತಮಟಕಲ್ಲು ಪ್ರದೇಶವು ೧೬೦೦ ವರ್ಷಗಳ ಇತಿಹಾಸವನ್ನು ಹೊಂದಿರುವ ತಮಟಕಲ್ಲು ಚಿತ್ರದುರ್ಗದ ಪಟ್ಟಡಿ ಗ್ರಾಮ ತಮಟಕಲ್ಲು ಎಂದು ಪಾಳೆಗಾರರ ದಾಖಲೆಗಳಲ್ಲಿ ತಮಟಕಲ್ಲು ಎನ್ನುವ ಉಲ್ಲೇಖವಿದೆ ಎಂದು ಇತಿಹಾಸಕಾರರು ತಿಳಿಸಿದ್ದಾರೆ. ಹಾಗೂ ಇಡೀ ಪ್ರಾಂತ್ಯ ಪಾಳೆಗಾರರ ಆಳ್ವಿಕೆಗೆ ಒಳಪಟ್ಟಿದ್ದು, ತಮಟಕಲ್ಲು ಸಹ ಆ ಪ್ರಾಂತ್ಯಕ್ಕೆ ಒಳಪಟ್ಟಿತ್ತು ಎಂದು ತಿಳಿಸಿದ್ದಾರೆ.[೨೭] ಈ ಎಲ್ಲಾ ಆಧಾರಗಳಿಂದ ತಮಟಕಲ್ಲು ಪ್ರದೇಶವು ಪಾಳೆಗಾರರ ಆಡಳಿತಕ್ಕೆ ಒಳಪಟ್ಟಿತ್ತೆಂದು ತಿಳಿಯಬಹುದಾಗಿದೆ.

## ಕೊನೆ ಟಿಪ್ಪಣಿಗಳು

೧. ನಾಯಕ.ಡಿ.ಬಿ., ಕರ್ನಾಟಕ ಗ್ರಾಮ ಚರಿತ್ರೆ ಕೋಶ, ೨೦೧೭ ಪು.ಸಂ.೧೩೪
೨. ಅದೇ ಪು.ಸಂ.೧೩೫
೩. ದೇವರಕೊಂಡಾರೆಡ್ಡಿ, ಇತಿಹಾಸ ದರ್ಶನ ಸಂಪುಟ-೩೩,೨೦೧೮, ಪು.ಸಂ.೨೬
೪. ನಾಯಕ.ಡಿ.ಬಿ., ಪೂರ್ವೋಕ್ತ. ೨೦೧೭ ಪು.ಸಂ ೧೩೪
೫. ಮಂಜುನಾಥ ಬೇವಿನಕಟ್ಟಿ, ಜಾನಪದ ಕರ್ನಾಟಕ ಸಂಪುಟ,೨೦೧೯, ಪು.ಸಂ.೧೦೬
೬. ಶಿವತಾರಕ್.ಕೆ.ಬಿ ಕರ್ನಾಟಕದ ಪುರಾತತ್ವ ನೆಲೆಗಳು, ೨೦೦೧, ಪು.ಸಂ.೦೮
೭. ಸುಂದರ.ಅ; ಕರ್ನಾಟಕ ಚರಿತ್ರೆ ಸಂಪುಟ-೧, ೧೯೯೭,ಪು.ಸಂ.೨೮೦
೮. ಗೋಪಾಲ್.ಆರ್. ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,೨೦೦೫,ಪು.ಸಂ.೪೦
೯. ಸೋಮಶೇಖರ್.ಎಸ್.ವೈ. ೨೦೧೭, ಕರ್ನಾಟಕ ದೇವಾಲಯ ಕೋಶ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ಪು.ಸಂ. ೧೧೨
೧೦. ಶಿವತಾರಕ್ ಕೆ,ಬಿ., ೨೦೦೧, ಪು.ಸಂ.೧೩೫
೧೧. ದೇವರಕೊಂಡಾರೆಡ್ಡಿ, ಇತಿಹಾಸ ದರ್ಶನ ಸಂಪುಟ-೩೩,೨೦೧೮, ಪು.ಸಂ.೨೬
೧೨. ಅದೇ ಪು.ಸಂ ೨೭
೧೩. ಗೋಪಾಲ್.ಆರ್. ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,೨೦೦೫,ಪು.ಸಂ.೪೦
೧೪. ಶಿವತಾರಕ್ ಕೆ,ಬಿ., ೨೦೦೧, ಪು.ಸಂ.೧೩೫
೧೫. ಶಿವತಾರಕ್ ಕೆ,ಬಿ., ೨೦೦೧, ಪು.ಸಂ.೧೩೫
೧೬. ಸುಂದರ.ಅ; ಕರ್ನಾಟಕ ಚರಿತ್ರೆ ಸಂಪುಟ-೧, ೧೯೯೭,ಪು.ಸಂ.೨೮೦
೧೭. ಗೋಪಾಲ್ ಆರ್., ಪೂರ್ವೋಕ್ತ, ೨೦೦೫, ಪು.ಸಂ.೪೧
೧೮. ದೇವರಕೊಂಡಾರೆಡ್ಡಿ, ಇತಿಹಾಸ ದರ್ಶನ ಸಂಪುಟ-೩೩,೨೦೧೮, ಪು.ಸಂ.೨೬
೧೯. ಅದೇ ಪು.ಸಂ.೨೭
೨೦. ಅದೇ ಪು.ಸಂ.೨೭
೨೧. ಸೋಮಶೇಖರ್.ಎಸ್.ವೈ., ಪೂರ್ವೋಕ್ತ, ೨೦೧೭, ಪು.ಸಂ.೧೧೨
೨೨. ಶಿವತಾರಕ್ ಕೆ,ಬಿ., ೨೦೦೧, ಪು.ಸಂ.೧೩೫
೨೩. ಸುಂದರ.ಅ; ಕರ್ನಾಟಕ ಚರಿತ್ರೆ ಸಂಪುಟ-೧, ೧೯೯೭,ಪು.ಸಂ.೩೯೦
೨೪. ದೇವರಕೊಂಡರೆಡ್ಡಿ, ಇತಿಹಾಸ ದರ್ಶನ ಸಂಪುಟ-೩೩,೨೦೧೮, ಪು.ಸಂ.೨೬
೨೫. ಎ.ಕ. ಸಂ.೧೧ (ಹಳೆಯ), ೧೯೦೩, ಚಿತ್ರದುರ್ಗ, ಪು.ಸಂ.೧೬
೨೬. ಶ್ರೀನಿವಾಸ್ ಎಂ.ವಿ. ಲಕ್ಷ್ಮಣ್ ತೆಲಗಾವಿ (ಸಂ), ಪೂರ್ವೋಕ್ತ, ಪು.೩೫
೨೭. ಚಿತ್ರಲಿಂಗಯ್ಯ ಎಂ.ವಿ., ಹರತಿ ಪಾಳೆಗಾರರ ಮೂಲ ವಂಶಾವಳಿ ಒಂದು ವ್ಯಾಸಂಗ, ಹರತಿಸಿರಿ, ಲಕ್ಷ್ಮಣ್ ತೆಲಗಾವಿ (ಸಂ), ೧೯೮೨, ಪು.ಸಂ.೩೧೬

* * *

# ಅಧ್ಯಾಯ - ಮೂರು

## ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ

೩.೧ ದೇವಾಲಯಗಳು

೩.೨ ಮೂರ್ತಿ ಶಿಲ್ಪಗಳು

೩.೩ ಶಾಸನ ಮತ್ತು ಸ್ಮಾರಕ ಶಿಲ್ಪಗಳು

# ಅಧ್ಯಾಯ – ಮೂರು
# ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ

## ೩.೧ ದೇವಾಲಯಗಳು

### ದೇವಾಲಯದ ಉಗಮ ಮತ್ತು ವಿಕಾಸ

ವಾಸ್ತವವಾಗಿ ಕಲೆ ಎಂದರೆ ಮನುಷ್ಯನ ನಿಗೂಢ ಭಾವನೆಗಳನ್ನು ಚಿತ್ರ ಶಿಲ್ಪಕಲೆಗಳ ರೂಪದಲ್ಲಿ ತೋರಿಸುವುದೇ ಆಗಿದೆ. ಜೀವನದ ಸಾಮಾಜಿಕ, ರಾಜಕೀಯ, ಮತ್ತು ಸಾಂಸ್ಕೃತಿಕ ಘಟನಾವಳಿಗಳ ವಿಶಿಷ್ಟ ರೂಪವೇ ಕಲೆ ಎಂದು ಹೇಳಬಹುದು. ಈ ಆದಿ ಮಾನವನ ಕಾಲದಿಂದಲೂ ಬೆಳೆದು ಬಂದದನ್ನೂ ಕಾಣುತ್ತೇವೆ. ಮನುಷ್ಯನಲ್ಲಿ ಕಾಣುವ ಮುಖ್ಯ ಗುಣಗಳೆಂದರೆ, ತಾನು ಕಂಡು ಅನುಭವಿಸಿದ ಸಿಹಿ–ಕಹಿ ಅನುಭವಗಳನ್ನು ಕಲೆಯ ಮೂಲಕ ಇತರರಿಗೆ ತಿಳಿಯಪಡಿಸುವುದು. ಈ ರೀತಿ ಮಾನವನಲ್ಲಿ ಅಂತರ್ಗತವಾಗಿರುವ ಅಭಿವ್ಯಕ್ತಿಯೇ ಕಲೆಯಾಗುತ್ತದೆ. ಒಟ್ಟಾರೆಯಾಗಿ ಹೇಳುವುದಾದರೆ ಯಾವುದೇ ಒಂದು ಕೆಲಸವನ್ನು ನಿಯಮಬದ್ಧವಾಗಿ ಕ್ರಮಬದ್ಧವಾಗಿ ಮಾಡುವುದೇ ಕಲೆ ಎನಿಸಿಕೊಳ್ಳುತ್ತದೆ.

ಗಟ್ಟಿಯಾದ ವಸ್ತುವಿನಿಂದ ವಾಸ್ತುವಿನ(ನಿವೇಶನ) ಮೇಲೆ ರಚನೆಗೊಂಡ ಎಲ್ಲಿ ವಾಸಯೋಗ್ಯ ರಚನೆಗಳೂ ರಚನೆ ಎನಿಸಿಕೊಳ್ಳುತ್ತವೆ. ಈ ರೀತಿಯ ವಾಸ್ತು ರಚನೆಗಳು ಮಾನವನ ನಾಗರೀಕತೆಯ ಮಾನದಂಡ ಎಂದರೂ ತಪ್ಪಾಗಲಾರದು. ಕಾಲಾಂತರದಲ್ಲಿ ಮಾನವನ ಬೌದ್ಧಿಕ ವಿಕಸನದ ರೀತಿಯ ಖಚಿತತೆಯ ಪ್ರತ್ಯಕ್ಷ ಸಾಕ್ಷಿಗಳೆಂದು ಹೇಳಬಹುದು.[೧]

ಮಾನಸಾರ, ಮಯಮತ, ಕಶ್ಯಪ, ವೈಖಾನಸ, ವಿಶ್ವಕರ್ಮೀಯ, ಇನ್ನು ಮೊದಲಾದ ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ದೇವಾಲಯಗಳ ನಿರ್ಮಾಣ ಕುರಿತ ಅನೇಕ ವಿವರಗಳು ದೊರೆಯುತ್ತವೆ.

ದುರಾದೃಷ್ಟವಶಾತ್ ಈ ಎಲ್ಲ ಗ್ರಂಥಗಳು ಪೂರ್ಣಪ್ರಮಾಣದಲ್ಲಿ ದೊರೆಯದೇ ಇದ್ದುದು ದೇವಾಲಯಗಳ ಬಗ್ಗೆ ಇನ್ನೂ ಹೆಚ್ಚಿನ ವಿವರಗಳ ತಿಳಿದುಕೊಳ್ಳಲು ಸಾಧ್ಯವಾಗುತ್ತಿಲ್ಲ.[೨] ಆದರೂ ಮಾನಸಾರ ಗ್ರಂಥವು ದೇವಾಲಯಗಳ ನಿರ್ಮಾಣದ ಬಗ್ಗೆ ಹೆಚ್ಚಿನ ವಿವರಗಳನ್ನು ತಿಳಿಸುತ್ತದೆ. ಈ ಗ್ರಂಥವು ಒಟ್ಟು ೭೦ ಅಧ್ಯಾಯಗಳನ್ನು ಹೊಂದಿದ್ದು, ಪ್ರತಿ ಅಧ್ಯಾಯದಲ್ಲೂ ದೇವಾಲಯಗಳ ನಿರ್ಮಾಣದ ಉದ್ದೇಶ, ಶಿಲ್ಪಿಗೆ ಇರಬೇಕಾದ ಅರ್ಹತೆಗಳು, ನಿರ್ಮಾಣ ಯೋಗ್ಯ ಸ್ಥಳ, ದೇವಾಲಯಗಳನ್ನು ಗ್ರಾಮ, ನಗರಗಳ ಯಾವ ಭಾಗದಲ್ಲಿ, ಯಾವ ದಿಕ್ಕಿನಲ್ಲಿ ಕಟ್ಟಬೇಕು, ತಳವಿನ್ಯಾಸ, ಅಧಿಷ್ಠಾನ, ಶಿಖರ, ದೇವರುಗಳ ಪ್ರತಿಷ್ಠಾಪನೆ, ಪರಿವಾರ ದೇವರುಗಳ ಪ್ರತಿಷ್ಠಾಪನೆ ಇನ್ನು ಮುಂತಾದ ವಿವರಗಳನ್ನು ತಿಳಿಸುತ್ತದೆ.[೩]

ಮಯಮತ ಗ್ರಂಥವೂ ಮಾನಸಾರ ಕೃತಿಯಲ್ಲಿರುವ ವಿವರಗಳನ್ನು ಹೇಳುತ್ತಾರೆ. ಕಟ್ಟಡವನ್ನು ಕಟ್ಟಲು ಪ್ರಾರಂಭಿಸಿದಾಗ ವಾಸ್ತುಪುರುಷನು ತೃಪ್ತಿಪಡಿಸಲು ಮಾಡಬೇಕಾದ ಸಂಸ್ಕಾರ, ವಿಧಿ, ವಿಧಾನಗಳನ್ನು ತಿಳಿಸುತ್ತದೆ. ದೇವಾಲಯದ ಉಪಪೀಠ, ಅಧಿಷ್ಠಾನ, ಭಿತ್ತಿ, ಪ್ರಸ್ತರ, ಕಟ್ಟಡದ ಮೇಲ್ಛಾವಣಿ, ದೇವಾಲಯದ ಶಿಖರ, ಪ್ರಕಾರ, ಮಂಟಪಗಳು, ಬಲಿಪೀಠ, ಇನ್ನು ಮುಂತಾದ ವಿವರಳಗನ್ನು ತಿಳಿಸುತ್ತದೆ. ಈ ಗ್ರಂಥದ ಕರ್ತೃ 'ಮಯ' ಇರಬಹುದೆಂದು ಹೇಳಲಾಗುತ್ತದೆ.[೪]

ಕಶ್ಯಪ ಋಷಿಯಿಂದ ರಚನೆಗೊಂಡ 'ಕಶ್ಯಪ' ಕೃತಿಯು ಗದ್ಯರೂಪದಲ್ಲಿದ್ದು, ಹೆಚ್ಚುಕಡಿಮೆ ಮೇಲೆ ವಿವರಿಸಿದ ವಿಷಯಗಳನ್ನೇ ವಿವರಿಸುತ್ತದೆ. ದೇವಾಲಯ ನಿರ್ಮಾಣಕ್ಕೆ ಬೇಕಾದ ಸೂಕ್ತವಾದ ಸ್ಥಳ, ದೇವಾಲಯ ನಿರ್ಮಾಣದ ಪ್ರಾರಂಭದಲ್ಲಿ ಮಾಡಬೇಕಾದ ಸಂಸ್ಕಾರಗಳು, ದ್ವಾರಗಳು, ಅಲಂಕರಣೆಗಳು, ದೇವಕೋಷ್ಟಗಳು, ಶಿಖರ, ವಿಮಾನ, ಪ್ರಮುಖ ದೇವ, ದೇವತೆಗಳ ವಿಗ್ರಹಗಳು, ಇತ್ಯಾದಿ ವಿವರಗಳನ್ನು ತಿಳಿಸುತ್ತದೆ. ವೈಖಾನಸ ಋಷಿಯಿಂದ ರಚಿಸಲ್ಪಟ್ಟ 'ವೈಖಾನಸ' ಗ್ರಂಥವು ದೇವಾಲಯಗಳು, ಗ್ರಾಮ, ನಗರ, ಪಟ್ಟಣಗಳನ್ನು ಕಟ್ಟುವ ಮೊದಲು ಮಾಡಬೇಕಾದ ಸಂಸ್ಕಾರ ವಿಧಾನಗಳನ್ನೇ ವಿಶೇಷವಾಗಿ ಈ ಗ್ರಂಥವು ತಿಳಿಸುತ್ತದೆ.[೫] ಸಕಲಾಧಿಕಾರ ಇನ್ನು ಮುಂತಾದ ಶಿಲ್ಪಶಾಸ್ತ್ರ ಗ್ರಂಥಗಳೂ ಸಹ ದೇವಾಲಯಗಳ ನಿರ್ಮಾಣ ಮತ್ತಿತರ ವಿವರಗಳನ್ನು ತಿಳಿಸುತ್ತವೆ. ಹೀಗೆ ಈ ಗ್ರಂಥಗಳಲ್ಲಿ ಉಲ್ಲೇಖಗೊಂಡಿರುವ ಅಂಶಗಳ ಹಿನ್ನಲೆಯಲ್ಲಿ ದೇವಾಲಯಗಳ ಉಗಮ, ನಿರ್ಮಾಣ ಮತ್ತು ವಿಕಾಸವನ್ನು ಈ ಮುಂದಿನಂತೆ ನೋಡಬಹುದು.

## ಶೈವ ದೇವಾಲಯಗಳು

ಧರ್ಮಗಳಲ್ಲಿಯೇ ಪ್ರಾಚೀನವಾದುದು ಮತ್ತು ಭಾರತದಲ್ಲಿ ಹೆಚ್ಚು ವ್ಯಾಪಕವಾದುದು ಶೈವ ಧರ್ಮ. ಇದರ ಮೂಲವನ್ನು ಪುರಾತತ್ವ ಆಕರಗಳ ಆಧಾರದ ಮೇಲೆ ಹರಪ್ಪ ಸಂಸ್ಕೃತಿಯಲ್ಲಿಯೇ ಪ್ರಚಲಿದಲ್ಲಿತ್ತು ಎಂದು ವಿದ್ವಾಂಸರು ಗುರುತಿಸಿದ್ದಾರೆ. ಈ ಹಿನ್ನಲೆಯಲ್ಲಿ ಶೈವ ಧರ್ಮ ಹರಪ್ಪ ಸಂಸ್ಕೃತಿಗಿಂತಲೂ ಮೊದಲೇ ಅಸ್ತಿತ್ವದಲ್ಲಿರಬಹುದೆಂದು ಊಹಿಸಬಹುದು. ಪ್ರಾಚೀನವಾದ ಈ ಶೈವ ಧರ್ಮವು ಹಂತ ಹಂತವಾಗಿ ಬೆಳವಣಿಗೆ ಹೊಂದಿದುದನ್ನು

ತಿಳಿಯಬಹುದು. ಮೊದಲಿದ್ದ ಲಿಂಗಾರಾಧನೆಯು ನಂತರದಲ್ಲಿ ಒಂದು ಹೆಜ್ಜೆ ಮುಂದೆ ಸಾಗಿ ಸ್ಥಾವರಲಿಂಗ ಅಥವಾ ಅಚಲ ಲಿಂಗಗಳನ್ನು ಸ್ಥಾಪಿಸಿ ಅವುಗಳ ರಕ್ಷಣೆಗಾಗಿ ದೇವಾಲಯಗಳು ನಿರ್ಮಾಣವಾಗಲು ಸ್ಫೂರ್ತಿಯಾದವು. ಕನ್ನಡ ನಾಡಿನ ರಾಜರೂ, ಸಾಮಂತ ಮನ್ನೆಯರೂ, ಜನಸಾಮಾನ್ಯರೂ ಶೈವಧರ್ಮದ ಆರಾಧಕರಾಗಿದ್ದರು. ಕರ್ನಾಟಕದಲ್ಲಿ ಶೈವಧರ್ಮವನ್ನು ಪ್ರತಿಬಿಂಬಿಸುವ ಸ್ಮಾರಕಗಳಲ್ಲಿ ದೇವಾಲಯಗಳು ಬಹುಪ್ರಧಾನವಾಗಿ ನಿಲ್ಲುತ್ತವೆ. ಕದಂಬರಿಂದ ಪಾಳೆಯಗಾರರಿಗೆ ಅನೇಕ ರಾಜಮನೆತನಗಳು ತಮ್ಮ ಪ್ರಾದೇಶಿಕ ವ್ಯಾಪ್ತಿಯಲ್ಲಿ ಶೈವ ದೇವಾಲಯಗಳನ್ನು ನಿರ್ಮಿಸಿದರು.

ಪ್ರಸ್ತುತ ಅಧ್ಯಯನ ಕ್ಷೇತ್ರವಾದ ತಮಟಕಲ್ಲು ಪರಿಸರದಲ್ಲಿ ಶೈವ ದೇವಾಲಗಳನ್ನು ಕಾಣಬಹುದಾಗಿದೆ ಇದರಿಂದ ಶೈವ ಧರ್ಮದ ವಿಸ್ತೃತ ವ್ಯಾಪ್ತಿಯನ್ನು ಕಾಣಬಹುದಾಗಿದೆ.

### ಈಶ್ವರ ದೇವಾಲಯ

ಈ ದೇವಾಲಯವು ತಮಟಕಲ್ಲು ಗ್ರಾಮದ ಮಧ್ಯಭಾಗದಲ್ಲಿ ನಿರ್ಮಾಣವಾಗಿದೆ. ಇದು ದಕ್ಷಿಣಕ್ಕೆ ಅಭಿಮುಖ ಮಾಡಿದ ದೇವಾಲಯವಾಗಿದೆ. ಇದರ ಕಾಲಮಾನ ಸುಮಾರು ಕ್ರಿ.ಶ ೧೬-೧೭ನೇ ಶತಮಾನದ್ದಾಗಿದೆ. ಇದು ಶೈವ ಪಂಥಕ್ಕೆ ಸೇರಿದ ದೇವಾಲಯವಾಗಿದ್ದು, ಗರ್ಭಗೃಹ ಮಾತ್ರ ಹೊಂದಿದ್ದು ಅರ್ಧ ಅಡಿ ಎತ್ತರದ ಮೇಲೆ ಶಿವಲಿಂಗವಿದೆ. ಶಿವಲಿಂಗದ ಹಿಂಭಾಗದಲ್ಲಿ ಕಂಚಿನ ಪ್ರಭಾವಳಿ ಇದ್ದು, ಶಿವಲಿಂಗದ ಬಲಭಾಗದಲ್ಲಿ ನಂದಿರೂಢ ಶಿವನ ಕಂಚಿನ ಶಿಲ್ಪವಿದೆ. ಎಡಭಾಗದಲ್ಲಿ ಎರಡು ಜೋಡಿ ನಾಗರ ಶಿಲ್ಪಗಳಿವೆ. ಶಿವಲಿಂಗಕ್ಕೆ ಅಭಿಮುಖವಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವಾಲಯಕ್ಕೆ ಎಡೆಕಲ್ಲು ಬೆಟ್ಟದ ಮೇಲಿರುವ ನಂದಿಯ ವಿಗ್ರಹ ಎದುರು ಮುಖಮಾಡಿದೆ. ಇದು ನೆಲದಿಂದ ೧೦ ಅಡಿ ಎತ್ತರದ ಕಟ್ಟಡದಲ್ಲಿ ನಿರ್ಮಾಣವಾಗಿದೆ. ಗೋಡೆಯ ಮೇಲೆ ಅಲಂಕಾರಿಕ ಚಿತ್ರಗಳನ್ನು ಕಾಣುತ್ತೇವೆ. ಶಿವರಾತ್ರಿಯಲ್ಲಿ ವಿಶೇಷವಾದ ಪೂಜೆಯು ನೆಡೆಯುವುದು ಈ ದೇವಾಲಯದ ವಿಶೇಷ.

### ಸೂಜಿ ದೇವರು (ಸೂರ್ಯಲಿಂಗೇಶ್ವರ)

ಈ ದೇವಾಲಯವು ತಮಟಕಲ್ಲು ಗ್ರಾಮದ ವಾಸಿಯಾದ ಕಡೂರು ವಂಶಸ್ಥರು ಎಂಬ ಮನೆತನಕ್ಕೆ ಸೇರಿದ ದೇವಾಲಯವಾಗಿದೆ. ಈ ದೇವಾಲಯವು ಕೂಡ ಶೈವ ಪಂಥಕ್ಕೆ ಸೇರಿದ ದೇವಾಲಯವಾಗಿದೆ. ಇದು ಗರ್ಭಗೃಹ ಮತ್ತು ತೆರೆದ ಸಭಾಮಂಟಪವನ್ನು ಹೊಂದಿದೆ. ಇದರ ಕಾಲವಮಾನವು ಸುವಮಾರು ಕ್ರಿ.ಶ ೨೦ನೇ ಶತವಮಾನದಲ್ಲಿ ನಿರ್ವಾಣವಾದ ದೇವಾಲಯವಾಗಿದೆ. ಇದು ಪೂರ್ವಕ್ಕೆ ಅಭಿಮುಖ ಮಾಡಿದ ದೇವಾಲಯವಾಗಿದೆ. ಇದರ ಮೇಲ್ವಿಚಾರಣೆ ಮತ್ತು ಪೂಜಾ ಕಾರ್ಯಕ್ರಮಗಳು ಈ ಕುಟುಂಬಕ್ಕೆ ಸೇರಿದ್ದಾಗಿದೆ ಎಂದು

ಗ್ರಾಮಸ್ಥರು ನೀಡುವ ಮಾಹಿತಿಯಾಗಿದೆ. ಊರಿನ ಪ್ರಮುಖ ಹಬ್ಬದಂದು ವಿಶೇಷವಾದ ಪೂಜಾ ಕಾರ್ಯಕ್ರಮಗಳು ದೇವಾಲಯದಲ್ಲಿ ನೆಡೆಯುತ್ತವೆ.

## ಭೈರಸಿದ್ದೇಶ್ವರ ದೇವಾಲಯ

ಇದು ತಮಟಕಲ್ಲು ಗ್ರಾಮದ ವಾಸಿಯಾದ ಪಲ್ಲೆಜ್ಜರು ಎಂಬ ವಂಶಕ್ಕೆ ಸೇರಿದ ದೇವಾಲಯವಾಗಿದೆ ಎಂದು ಸ್ಥಳೀಯರ ಮಾಹಿತಿಯಾಗಿದೆ. ಇದು ಪೂರ್ವಕ್ಕೆ ಅಭಿಮುಖ ಮಾಡಿದ ದೇವಾಲಯವಾಗಿದೆ. ಈ ದೇವಾಲಯವು ಶೈವ ಪಂಥಕ್ಕೆ ಸೇರಿದ ದೇವಾಲಯವಾಗಿದೆ. ಈ ದೇವಾಲಯವು ಗರ್ಭಗೃಹ ಮತ್ತು ವಿಶಾಲವಾದ ತೆರೆದ ಸಭಾಮಂಟಪವನ್ನು ಹೊಂದಿದೆ. ಇದರ ಕಾಲಮಾನ ಸುಮಾರು ಕ್ರಿ. ಶ. ೨೦ನೇ ಶತಮಾನಕ್ಕೆ ಸೇರಿದಾಗಿದೆ ಆಧುನಿಕ ಶೈಲಿಯನ್ನು ಹೊಂದಿದೆ. ಇದರ ಪೂಜಾಕಾರ್ಯಕ್ರಮಗಳನ್ನು ಮತ್ತು ಉಸ್ತುವಾರಿಯನ್ನು ಈ ಕುಟುಂಬದವರು ನೋಡಿಕೊಳ್ಳುತ್ತಾರೆ. ಮತ್ತು ಯುಗಾದಿಯ ಸಂಧರ್ಭದಲ್ಲಿ ವಿಶೇಷವಾದ ಪೂಜೆಯನ್ನು ಮಾಡಲಾಗುವುದು ಎಂದು ಮಾಹಿತಿ ನೀಡಿದ್ದಾರೆ.

## ವೈಷ್ಣವ ದೇವಾಲಯಗಳು

ಭಾರತೀಯರ ಪ್ರಾಚೀನ ಧರ್ಮಗಳಲ್ಲಿ ವೈಷ್ಣವ ಧರ್ಮವೂ ಒಂದು. ತ್ರಿಮೂರ್ತಿಗಳಲ್ಲಿ ಸ್ಥಾನವನ್ನು ಪಡೆದುಕೊಂಡಿರುವ ವಿಷ್ಣು ವೈಷ್ಣವರ ಆರಾಧ್ಯ ದೈವ. ವೈಷ್ಣವ ಧರ್ಮದ ಮೂಲಗಳನ್ನು ವೈದಿಕ ಸಾಹಿತ್ಯದಲ್ಲಿ ಗುರುತಿಸುತ್ತಾರೆ. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಸಾಂಬ ಮತ್ತು ಅನಿರುದ್ಧರೆನ್ನುವ ಪಂಚವೀರರು ಇದರ ಅನುಯಾಯಿಗಳಾಗಿದ್ದರಿಂದ ಇವರ ಆರಾಧನೆಯನ್ನು ವೀರವಾದ ಎಂದು ಕರೆಯಲಾಗುತ್ತದೆ. ಈ ವಾದದ ಪ್ರಕಾರ ವಾಸುದೇವನೇ ಶ್ರೇಷ್ಠ. ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧರು ಒಬ್ಬರಾದ ನಂತರ ಮತ್ತೊಬ್ಬರು ವಾಸುದೇವನಿಂದ ಆವಿರ್ಭವಿಸಿದವರು. ಸುಮಾರು ಕ್ರಿ.ಪೂ. ೪ನೇ ಶತಮಾನದ ವೇಳೆಗೆ ಮಥುರಾ ಪ್ರದೇಶದ ಜನರು ವಾಸುದೇವ ಅಥವಾ ಶ್ರೀಕೃಷ್ಣನ ಪೂಜೆಯನ್ನು ಮಾಡುತ್ತಿದ್ದರೆಂದು ಗ್ರೀಕ್ ರಾಯಭಾರಿ ಮೆಗಸ್ತಾನಿಸ್ ಮತ್ತು ಪಾಣಿನಿಯವರು ಅಭಿಪ್ರಾಯಪಟ್ಟಿದ್ದಾರೆ. ಕ್ರಿ.ಪೂ ೩ನೇ ಶತಮಾನದ ಬೆಸನಗರ ಶಾಸನದಲ್ಲಿ ಗ್ರೀಕ್ ರಾಯಭಾರಿ ಎಲಿಯೋಡೊರೆಸ್ ಭಾಗವತನಾಗಿದ್ದು, ಗರುಡಧ್ವಜವನ್ನು ನಿರ್ಮಿಸಿ 'ದೇವ ದೇವನಾದ ವಾಸುದೇವನನ್ನು ಪೂಜಿಸುವ ಪರಮ ಭಾಗವತ ನಾನು' ಎಂದು ತನ್ನನ್ನು ಕರೆದುಕೊಂಡಿದ್ದಾನೆ. ಕ್ರಿ.ಶ. ಆರಂಭದ ವೇಳೆಗೆ ಭಗವತ ಧರ್ಮವು ಉತ್ತರಪ್ರದೇಶ, ರಾಜಸ್ತಾನ, ಮಧ್ಯಪ್ರದೇಶ ಮತ್ತು ದಖನ್ಗಳಲ್ಲಿ ವ್ಯಾಪಿಸಿತು. ಶಾತವಾಹನರ ಕಾಲದಲ್ಲಿ ಕರ್ನಾಟಕದಲ್ಲಿ ಪ್ರಚಾರವಾದಂತೆ ತೋರುತ್ತದೆ. ಗೌತಮೀಪುತ್ರ ಶಾತಕರ್ಣಿಯನ್ನು ರಾಮ (ಬಲರಾಮ), ಕೇಶವ (ಕೃಷ್ಣ) ಹಾಗೂ ಇನ್ನಿತರ ಪೌರಾಣಿಕ ವ್ಯಕ್ತಿಗಳಿಗೆ ಹೋಲಿಸಲಾಗಿದೆ. ಪಲ್ಲವರು ತಮ್ಮನ್ನು ಶಾಸನಗಳಲ್ಲಿ ಪರಮ ಭಾಗವತರೆಂದು ಕರೆದುಕೊಂಡಿದ್ದಾರೆ. ಆದಿ ಕದಂಬ, ಗಂಗರ ಕಾಲಕ್ಕಾಗಲೇ ಈ

ಧರ್ಮವು ವ್ಯಾಪಕವಾಗಿ ಹರಡಿದ್ದನ್ನು ಹಲವಾರು ಶಾಸನಗಳು, ಶಿಲ್ಪಗಳು ಮತ್ತು ದೇವಾಲಯಗಳ ಸಹಾಯದಿಂದಲೇ ಮಾಹಿತಿಯು ತಿಳಿದುಬರುತ್ತದೆ.

ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ, ಮತ್ತು ಪಾಳೆಗಾರರು ವೈಷ್ಣವ ಪಂಥಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡಿದರು. ಪ್ರಸ್ತುತ ಅಧ್ಯಯನ ಕ್ಷೇತ್ರವಾದ ತಮಟಕಲ್ಲು ಪರಿಸರದಲ್ಲಿ ವಷ್ಣವ ಪಂಥಕ್ಕೆ ಸೇರಿದ ದೇವಾಲಯಗಳನ್ನು ನಾವು ಕಾಣುತ್ತೇವೆ.

**ಆಂಜನೇಯ ದೇವಾಲಯ**

ಸ್ಮಾರಕ – ಆಂಜನೇಯ ದೇವಾಲಯ
ಸ್ಥಳ – ಗ್ರಾಮದ ಮಧ್ಯೆ
ಅಭಿಮುಖ – ದಕ್ಷಿಣ
ಕಾಲ – ಕ್ರಿ.ಶ.ಸು.೧೮ನೇ ಶತಮಾನ
ಶೈಲಿ – ಸ್ಥಳೀಯ
ಸ್ಥಿತಿ – ಉತ್ತಮ
ಸಂರಕ್ಷಣೆ – --------

ತಮಟಕಲ್ಲು ಗ್ರಾಮದ ಪ್ರಮುಖ ಪ್ರಾಚೀನ ದೇವಾಲಯವೆಂದರೆ ಆಂಜನೇಯ ದೇವಾಲಯವಾಗಿದೆ. ಇದರಿಂದ ಈ ಗ್ರಾಮ ಹೆಚ್ಚು ಜನಪ್ರಿಯತೆಯನ್ನು ಪಡೆದುಕೊಂಡಿದೆ. ಈ ದೇವಾಲಯವು ವೈಷ್ಣವ ಪಂಥಕ್ಕೆ ಸೇರಿದ್ದು, ಗರ್ಭಗೃಹ, ಮುಖಮಂಟಪ, ವಿಶಾಲವಾದ ಸಭಾಮಂಟಪಗಳನ್ನು ಹೊಂದಿದ್ದು, ಸಂಪೂರ್ಣ ಜೀರ್ಣೋದ್ದಾರವಾಗಿ ಆಧುನಿಕರಣಗೊಂಡಿದೆ. ಗರ್ಭಗೃಹದಲ್ಲಿ ಆರು ಅಡಿಗಳೆತ್ತರದ ಆಂಜನೇಯನ ಉಬ್ಬು ಶಿಲ್ಪವನ್ನು ಸ್ಥಾಪಿಸಿ ಪೂಜಿಸಲಾಗುತ್ತದೆ. ಗರ್ಭಗೃಹದ ಬಾಗಿಲುವಾಡವನ್ನು ಹಿತ್ತಾಳೆಯ ತಗಡಿನಿಂದ ಹೊದಿಸಿದ್ದು, ಇದರಲ್ಲಿ ಅಲಂಕಾರಗಳನ್ನು ಮಾಡಿರುವರು ಗರ್ಭಗೃಹ ಮತ್ತು ಪ್ರವೇಶದ್ವಾರಗಳ ಮೇಲೆ ದ್ರಾವಿಡ ಮಾದರಿಯ ಗೋಪುರಗಳನ್ನು ಇತ್ತೀಚಿಗೆ ನಿರ್ಮಿಸಿದ್ದಾರೆ.[೬]

ಈ ದೇವಾಲಯದ ಮುಖಮಂಟಪದ ಪ್ರಸ್ತರದ ಮೇಲಿರುವ ಮುಖಮಂಟಪದ ಬಲ ಮತ್ತು ಎಡ ಭಾಗದಲ್ಲಿ ಚಿಕ್ಕದಾದ ಎರಡು ಗೋಪುರಗಳಿದ್ದು ಕಪೋತಭಾಗದಲ್ಲಿ ಅಂಜಲಿಮುದ್ರೆಯಲ್ಲಿ ಗರುಡನ ಶಿಲ್ಪವಿದೆ. ಗೋಪುರದ ಮಧ್ಯಭಾಗದಲ್ಲಿ ಆಂಜನೇಯನು ಸಂಜೀವಿನಿ ಪರ್ವತವನ್ನು ಎಡಗೈಯಲ್ಲಿ ಹಿಡಿದಿರುವುನು, ಪಕ್ಕದಲ್ಲಿ ಚಿಕ್ಕದಾದ ಗೂಡುಮಂಟಪದಲ್ಲಿ ಪದ್ಮಾಸನದಲ್ಲಿ ಕುಳಿತ ಆಂಜನೇಯನ ಶಿಲ್ಪವಿದೆ. ಎಡಭಾಗದ ಚಿಕ್ಕ ಗೋಪುರದಲ್ಲಿ ಎದೆ ಬಗಿಯುತ್ತಿರುವ ಆಂಜನೇಯ ಶಿಲ್ಪವಿದೆ. ಬಲ ಮತ್ತು ಎಡ ಭಾಗದಲ್ಲಿ ವೀರಮಂಡಿಯಲ್ಲಿ ಕುಳಿತ ಆಂಜನೇಯ ಮತ್ತು ಗರುಡನ ಶಿಲ್ಪವಿದೆ. ಗೋಪುರವು ತ್ರಿತಲವನ್ನು ಹೊಂದಿದ್ದು ಮೊದಲನೇ ಭಾಗ ಬಾಗಿಲುವಾಡದಲ್ಲಿ ದ್ವಾರಪಾಲಕಿರುವರು ಅವರ ಬಲ ಮತ್ತು ಎಡ ಭಾಗದಲ್ಲಿ

ಗಣೇಶ ಮತ್ತು ಈಶ್ವರ ಶಿಲ್ಪಗಳಿವೆ. ಮೇಲೆ ಚಿಕ್ಕದಾದ ದೇವಾಲಯ ಗೋಪುರದ ಮಾದರಿ ಇದೆ. ಗೋಪುರದ ಎರಡನೆಯ ಹಂತದಲ್ಲಿ ಬಾಗಿಲು ಪಾರ್ಶ್ವದಲ್ಲಿ ಗದೆಯನ್ನು ಹಿಡಿದಿರುವ ದ್ವಾರಪಾಲಕರಿರುವ ಇವರ ಬಲ ಮತ್ತು ಎಡಭಾಗದಲ್ಲಿ ಈಶ್ವರನು ತ್ರಿಶೂಲವನ್ನು ಹಿಡಿದು ನಿಂತಿರುವನು. ಮತ್ತು ಎಡಭಾಗದಲ್ಲಿ ಚರ್ತುಮುಖ ಬ್ರಹ್ಮನ ನಿಂತಿರುವ ಶಿಲ್ಪವಿದೆ. ಮೂರನೆಯ ಹಂತದ ಗೋಪುರದಲ್ಲಿ ಗೋಪುರದ ತುತ್ತ ತುದಿಯಲ್ಲಿ ಕೈ ಮುಗಿದು ಕುಳಿತಿರುವ ಆಂಜನೇಯ ಶಿಲ್ಪವಿದ್ದು ಅದರ ಚಿಕ್ಕ ಗದೆಯನ್ನು ಹಿಡಿದಿರುವ ಮತ್ತೊಂದು ಆಂಜನೇಯ ಇವನ ಪಕ್ಕದಲ್ಲಿ ಚರ್ತುಮುಖ ಬ್ರಹ್ಮನು ನಿಂತಿರುವನು ಗೋಪುರದ ಕೊನೆಯಲ್ಲಿ ಸುಖನಾಸಿಯಲ್ಲಿ ಗಣಪನ ಮೂರ್ತಿಶಿಲ್ಪವಿದೆ. ಅದರ ಮೇಲಿನ ಭಾಗದಲ್ಲಿ ವಿಶಾಲವಾದ ಶಾಲಭಾಗವಿದ್ದು ಐದು ಕಳಸಗಳಿವೆ. ಗೋಪುರದ ಎಡ ಮತ್ತು ಬಲಭಾಗದಲ್ಲಿ ಸಿಂಹದ ಕೀರ್ತಿಮುಖವಿದೆ.

ಆಂಜನೇಯ ದೇವಸ್ಥಾನದ ಮುಂಭಾಗದಲ್ಲಿ ೨೧ ಅಡಿ ಎತ್ತರದ ಗರುಡು ಗಂಭವನ್ನು ನಿಲ್ಲಿಸಿದ್ದಾರೆ. ಅದರ ಮೇಲೆ ಲಕ್ಷ್ಮಿ ವಿಗ್ರಹಗಳನ್ನು ಕೆತ್ತನೆ ಮಾಡಲಾಗಿದೆ. ಈ ದೇವಾಲಯದ ಮುಂಭಾಗದಲ್ಲಿ ೫೧ ಅಡಿ ಎತ್ತರದ ಆಂಜನೇಯನ ವಿಗ್ರಹವನ್ನು ನಿರ್ಮಿಸುತ್ತಿದ್ದಾರೆ. ಇದು ಸುಮಾರು ೫೦ ಲಕ್ಷ ಅಂದಾಜು ವೆಚ್ಚದಲ್ಲಿ ನಿರ್ಮಾಣವಾಗುತ್ತಿದೆ. ಅರ್ಧದಷ್ಟು ಕೆಲಸ ಮುಗಿದಿದೆ. ಹಾಗೆಯೇ ದೇವಾಸ್ಥಾನದ ಪಕ್ಕದಲ್ಲಿ ಕಲ್ಯಾಣ ಮಂಟಪವನ್ನು ನಿರ್ಮಾಣ ಮಾಡಲಾಗಿದೆ. ಇದರಿಂದ ಹೆಚ್ಚು ಭಕ್ತಾದಿಗಳು ಈ ಪ್ರದೇಶದಲ್ಲಿ ಮದುವೆ ಮತ್ತಿತರ ಶುಭಕಾರ್ಯಗಳನ್ನು ಮಾಡಲು ಉತ್ತಮವಾದ ಪ್ರದೇಶವಾಗಿದೆ. ಈ ಗ್ರಾಮಕ್ಕೆ ಹೋಗಲು ಉತ್ತಮವಾದ ರಸ್ತೆಯನ್ನು ಒಳಗೊಂಡಿದೆ ಭಕ್ತಾದಿಗಳಿಗೆ ಉತ್ತಮವಾದ ವಾತವರಣವನ್ನು ನೀಡುವ ಕ್ಷೇತ್ರವಾಗಿದೆ. ಅಮವಾಸ್ಯೆ ದಿನದಂದು ಭಜನೆ ಕಾರ್ಯಕ್ರಮಗಳು ನೆಡೆಯುತ್ತವೆ. ಶ್ರಾವಣ ಮಾಸದಂದು ವಿಶೇಷ ಪೂಜೆ ಹಾಗೂ ತಿಂಗಳ ಕಡೆ ಶನಿವಾರ ಅನ್ನ ದಾಸೋಹ ನೆಡೆಯುತ್ತದೆ. ಪ್ರತಿ ಶನಿವಾರದಂದು ಭಕ್ತರು ಬಂದು ತಮ್ಮ ಬೇಡಿಕೆನ್ನಿಟ್ಟು ದೇವರ ಬಲ ಅಥವಾ ಎಡಭಾಗದ ಪುಷ್ಪಗಳನ್ನು ಪಡೆಯುವುದರ ಮೂಲಕ ತಮ್ಮ ಬೇಡಿಕೆಯು ಈಡೇರುತ್ತದೆ ಎಂಬ ನಂಬಿಕೆ ಇದೆ. ಇದೆಲ್ಲಾ ಹೊರತಾಗಿ ಆಂಜನೇಯ ದೇವಸ್ಥಾನದ ಪ್ರಾಮುಖ್ಯತೆಯೊಂದಿಗೆ ತಮಟಕಲ್ಲು ಗ್ರಾಮವೂ ಪ್ರಾಗಿತಿಹಾಸಿಕ ಮತ್ತು ಐತಿಹಾಸಿಕ ಮಹತ್ವದ ಜೊತೆಗೆ ಚಿತ್ರದುರ್ಗದ ಪರಿಸರದ ಪ್ರಮುಖ ಧಾರ್ಮಿಕ ಕೇಂದ್ರವಾಗಿ ತಮಟಕಲ್ಲು ಗ್ರಾಮವು ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ ಎಂದು ಹೇಳಬಹುದು.

## ರಂಗಸ್ವಾಮಿ ದೇವಾಲಯ

ತಮಟಕಲ್ಲು ಗ್ರಾಮದ ಮಧ್ಯಭಾಗದಲ್ಲಿ ಪೂರ್ವಕ್ಕೆ ಅಭಿಮುಖವಾದ ದೇವಾಲಯವಾಗಿದೆ. ಈ ದೇವಾಲಯವು ಕ್ರಿಶ ಸುಮಾರು ೨೦ನೇ ಶತಮಾನದ ಕಾಲಮಾನವಾಗಿದ್ದು, ವೈಷ್ಣವ ಪಂಥಕ್ಕೆ ಸೇರಿದ ದೇವಾಲಯವಾಗಿದೆ. ಇದು ಗರ್ಭಗೃಹ ಮಾತ್ರ ಹೊಂದಿದ್ದು, ಇದು ಆಧುನಿಕ

ಟೈಲ್ಸ್‌ಗಳಿಂದ ಅಲಂಕಾರಗೊಳಿಸಲಾಗಿದೆ. ಗರ್ಭಗೃಹದ ಪೀಠದ ಮೇಲೆ ರಂಗಸ್ವಾಮಿಯ ವಿಗ್ರಹ ಮತ್ತು ಬಲಭಾಗದಲ್ಲಿ ತ್ರಿಶೂಲ, ಜೋಡಿ ನಾಗಶಿಲ್ಪಗಳನ್ನು ಕಾಣಬಹುದಾಗಿದೆ. ಇದು ಕೂಡ ತಮಟಕಲ್ಲು ಗ್ರಾಮದ ಪ್ರಮುಖ ದೇವಾಲಯಗಳಲ್ಲಿ ಒಂದಾಗಿದೆ. ಈ ದೇವಾಲಯದಲ್ಲಿ ಕುದುರೆಯ ವಿಗ್ರಹವನ್ನು ನೋಡಬಹುದು ಇದು ಯುಗಾದಿಯ ಸಂಧರ್ಭದಲ್ಲಿ ಅಲಂಕಾರಗೊಂಡು ರಂಗನಾಥ ಬೆಟ್ಟದ ಕೆಳಗೆ ಅಗ್ನಿಕುಂಡದ ಬಳಿ ಹೋಗಿ ಕೆಂಡೋತ್ಸವದಲ್ಲಿ ಪಾಲ್ಗೊಳ್ಳುತ್ತದೆ. ಮತ್ತೊಂದು ರಂಗನಾಥಸ್ವಾಮಿ ದೇವಾಲಯವನ್ನು ನಾವು ರಂಗನಾಥನ ಬೆಟ್ಟದಲ್ಲಿ ನೋಡಬಹುದಾಗಿದೆ. ಎರೆಡು ಬೃಹತ್ ಕಲ್ಲುಗಳ ಮಧ್ಯೆ ಇಕ್ಕಾಟ್ಟಾದ ಪ್ರದೇಶದಲ್ಲಿ ರಂಗನಾಥನ ವಿಗ್ರಹವನ್ನಿಟ್ಟು ಪೂಜೆಯನ್ನು ಮಾಡಲಾಗುತ್ತದೆ.

### ಭೂತಪ್ಪನ ದೇವಾಲಯ

ಇದು ತಮಟಕಲ್ಲು ಗ್ರಾಮದಲ್ಲಿರುವ ರಂಗನಾಥ ಬೆಟ್ಟದ ಕೆಳಗೆ ಪೂರ್ವಕ್ಕೆ ಅಭಿಮುಖವಾದ ದೇವಾಲಯವಾಗಿದೆ. ವೈಷ್ಣವ ಪಂಥಕ್ಕೆ ಸೇರಿದ ದೇವಾಲಯವಾಗಿದೆ. ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪವನ್ನು ಹೊಂದಿದೆ. ಇದರ ಕಾಲಮಾನ ಸುಮಾರು ಕ್ರಿ.ಶ. ೨೦ನೇ ಶತಮಾನಕ್ಕೆ ಸೇರಿದ್ದು ಆಧುನಿಕ ಶೈಲಿಯನ್ನು ಹೊಂದಿದೆ. ಭೂತಪ್ಪನ ವಿಗ್ರಹವು ಆರಾಧನೆಯನ್ನು ಇದರಲ್ಲಿ ಮಾಡಲಾಗುತ್ತದೆ. ಈ ದೇವಾಲಯದ ಮುಂದೆ ಅಗ್ನಿಕುಂಡವಿದೆ, ಯುಗಾದಿಯ ಸಂಧರ್ಭದಲ್ಲಿ ಇದರ ಮುಂದೆ ಕೆಂಡೋತ್ಸವ ನೆಡೆಯುತ್ತವೆ.

### ಶಾಕ್ತ ದೇವಾಲಯಗಳು

ಮಾತೃ ದೇವತೆಯ ರೂಪದಲ್ಲಿರುವ ಶಕ್ತಿ ದೇವತೆಯ ಆರಾಧಿಸುವ ಪದ್ಧತಿಗೆ ಶಾಕ್ತಪಂಥ ಎಂದು ಕರೆಯಲಾಗುತ್ತದೆ. ಭಾರತದಲ್ಲಿ ಶಾಕ್ತಪಂಥದ ಚರಿತ್ರೆಯನ್ನು ಸಿಂಧೂ ಸಂಸ್ಕೃತಿಯಿಂದ ಗುರುತಿಸಲಾಗಿದೆ. ವೈದಿಕ ಕಾಲಘಟ್ಟದ ನಂತರ ಶಕ್ತಿ ದೇವತೆ ಬೆಳವಣಿಗೆ ಪ್ರಮುಖವಾಗಿ ಕಂಡುಬರುತ್ತದೆ.

ಪ್ರಸ್ತುತ ಅಧ್ಯಯನ ಕ್ಷೇತ್ರವಾದ ತಮಟಕಲ್ಲು ಗ್ರಾಮದಲ್ಲಿ ಈ ಪಂಥದ ದೇವಾಲಯಗಳನ್ನು ನೋಡಬಹುದು ಇದರಿಂದ ಶಾಕ್ತ ಪರಂಪರೆ ವಿಸ್ತೃತ ವ್ಯಾಪ್ತಿಯನ್ನು ಕಾಣಬಹುದಾಗಿದೆ. ಅಂತಹ ಪ್ರಮುಖ ದೇವಾಲಯಗಳನ್ನು ನಾವು ಇಲ್ಲಿ ನೋಡಬಹುದು.

### ಉಡುಸಲಮ್ಮ ದೇವಾಲಯ

ತಮಟಕಲ್ಲು ಗ್ರಾಮದ ಗ್ರಾಮದೇವತೆಯಾಗಿ ಉಡುಸಲಮ್ಮ ದೇವಾಲಯ ಮಹತ್ವವನ್ನು ಪಡೆದುಕೊಂಡಿದೆ. ಈ ದೇವಾಲಯವು ಶಾಕ್ತ ಪಂಥಕ್ಕೆ ಸೇರಿದ್ದು ಇದು ಸುಮಾರು ಕ್ರಿ.ಶ ೨೦–

೨೧ ನೇ ಶತಮಾನದಲ್ಲಿ ನಿರ್ಮಾಣವಾದ ದೇವಾಲಯವಾಗಿದೆ. ಇದು ಗರ್ಭಗೃಹ ಮತ್ತು ವಿಶಾಲವಾದ ತೆರೆದ ಸಭಾಮಂಟಪ ಹೊಂದಿದ್ದು ಸಭಾಮಂಟಪದಲ್ಲಿ ಆರು ಕಂಬಗಳಿವೆ. ಗರ್ಭಗೃಹದಲ್ಲಿ ದೇವಿಗೆ ಕೀರ್ತಿಮುಖವನ್ನು ಹೊಂದಿದ್ದು ದೇವಿಯನ್ನು ವಸ್ತ್ರದಿಂದ ಅಲಂಕಾರ ಗೊಳಿಸಿದ್ದು, ಬೆಳ್ಳಿಯ ಮುಖವಾಡವನ್ನು ಇಟ್ಟಿರುವರು. ಇದು ಗ್ರಾಮದ ಮಧ್ಯಭಾಗದಲ್ಲಿರುವ ಈಶ್ವರನ ದೇವಸ್ಥಾನದ ಹಿಂಭಾಗದಲ್ಲಿ ಉತ್ತರಕ್ಕೆ ಅಭಿಮುಖ ಮಾಡಿದ ದೇವಾಲಯವಾಗಿದೆ. ಗ್ರಾಮದೇವತೆಯ ಹಬ್ಬವನ್ನು ಪ್ರತಿ ಎರಡು ವರ್ಷಕ್ಕೊಮ್ಮೆ ನೆಡೆಸಲಾಗುತ್ತದೆ. ರಾಜ್ಯದ ದೂರದ ಸ್ಥಳಗಳಿಂದ ಭಕ್ತಾಧಿಗಳು ಬಂದು ತಾಯಿಯ ಆಶೀರ್ವಾದ ಪಡೆದುಕೊಳ್ಳುವರು. ಈ ದೇವಾಲಯಕ್ಕೆ ಅಮ್ಮನಗುಡಿ ಎಂತಲೂ ಸಹ ಗ್ರಾಮಸ್ಥರು ಕರೆಯುವರು.

**ತೊಳಸಮ್ಮ ದೇವಾಲಯ**

ಇದು ಕೂಡ ತಮಟಕಲ್ಲು ಗ್ರಾಮದ ರಂಗಸ್ವಾಮಿ ಬೆಟ್ಟದ ಕೆಳಗಿರುವ ಭೂತಪ್ಪನ ದೇವಾಲಯದ ಪಕ್ಕದಲ್ಲಿ ಬರುವ ದೇವಾಲಯವಾಗಿದೆ. ಈ ದೇವಾಲಯವು ಶಾಕ್ತ ಪಂಥಕ್ಕೆ ಸೇರಿದ್ದು, ಇದರ ಕಾಲಮಾನ ಸುಮಾರು ಕ್ರಿಶ ಸುಮಾರು ೨೦-೨೧ನೇ ಶತಮಾನಕ್ಕೆ ಸೇರಿದ ದೇವಾಲಯವಾಗಿದೆ. ಇದು ಪೂರ್ವಕ್ಕೆ ಅಭಿಮುಖ ಮಾಡಿರುವ ದೇವಾಲಯವಾಗಿದೆ. ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪವನ್ನು ಹೊಂದಿದ್ದು ಆಧುನಿಕವಾಗಿ ನಿರ್ಮಾಣವಾಗಿದೆ. ಈ ದೇವರ ಮತ್ತೊಂದು ವಿಗ್ರಹವು ರಂಗಸ್ವಾಮಿ ಬೆಟ್ಟದಲ್ಲಿಟ್ಟು ಪೂಜೆ ಮಾಡುವುದು ಸ್ಥಳೀಯರ ನಂಬಿಕೆಯಾಗಿದೆ. ಪ್ರತಿ ಮಂಗಳವಾರ ದೇವಾಲಯದಲ್ಲಿ ಪೂಜೆಯನ್ನು ನೆಡೆಸಲಾಗುತ್ತದೆ.

**ಗೌರ ಸಮುದ್ರ ಮಾರಮ್ಮ ದೇವಾಲಯ**

ಈ ದೇವಾಲಯವು ತಮಟಕಲ್ಲು ಗ್ರಾಮದ ಮುಖ್ಯ ರಸ್ತೆಯಲ್ಲಿ ಕಂಡುಬರುವ ದೇವಾಲಯವಾಗಿದೆ. ಇದು ಗರ್ಭಗೃಹ ಹೊಂದಿದ್ದು ಆಧುನಿಕವಾಗಿ ನಿರ್ಮಾಣವಾಗಿದ್ದು ಪಶ್ಚಿಮಕ್ಕೆ ಅಭಿಮುಖ ಮಾಡಿದ ದೇವಾಲಯವಾಗಿದೆ.

## ೩.೨ ಮೂರ್ತಿಶಿಲ್ಪಗಳು

### ಮೂರ್ತಿಶಿಲ್ಪಗಳ ಉಗಮ

ಭಾರತದ ವಿವಿಧ ನೆಲೆಗಳ ಉತ್ಖನನದಲ್ಲಿ ದೊರೆತ ಪ್ರಾಕ್ತನಶಾಸ್ತ್ರ ಆಧಾರಗಳಿಂದ ಮೂರ್ತಿಶಿಲ್ಪಗಳು ವಾಸ್ತುಶಿಲ್ಪದಷ್ಟು ಪ್ರಾಚೀನವಾದವೆಂದು ತಿಳಿದುಬಂದಿದೆ. ಸಿಂಧೂ ನದಿ ಬಯಲಿನ ಸಂಸ್ಕೃತಿಯಲ್ಲಿ ದೊರೆತ ಶಿಲ್ಪಗಳೇ ಈ ವರೆಗೆ ಲಭ್ಯವಾದ ಭಾರತದ ಅತ್ಯಂತ ಪ್ರಾಚೀನ ಮೂರ್ತಿಶಿಲ್ಪಗಳೆಂದು ಪರಿಗಣಿಸಲಾಗಿದೆ.[೬] ಇವು ನಂತರದ ಭಾರತೀಯ

ಬೆಳವಣಿಗೆಗೆ ಪ್ರೇರಕವಾದವು. ವೇದಗಳ ಕಾಲದಲ್ಲಿ ಪ್ರಕೃತಿಯನ್ನು ಪೂಜಿಸುತ್ತಿದ್ದರು ಇಂದ್ರ, ವರುಣ, ರುದ್ರ ಮೊದಲಾದ ದೇವತೆಗಳಿಗೆ ಮನುಷ್ಯಾಕೃತಿಯ ಕಲ್ಪನೆಯನ್ನು ನೀಡಿರುವುದನ್ನು ಕಾಣಬಹುದು. ರಾಮಾಯಣ ಹಾಗೂ ಮಹಾಭಾರತದಲ್ಲಿ ದೇವಾಲಯಗಳ ಉಲ್ಲೇಖವಿರುವುದರಿಂದ ಆ ಕಾಲದಲ್ಲಿ ವಿಗ್ರಹರಾಧನೆ ಸ್ವಲ್ಪ ಮಟ್ಟಿಗೆ ಪ್ರಚಲಿತದಲ್ಲಿತ್ತೆಂದು ಪ್ರಾಕ್ತನಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ. ಆದಿ ಇತಿಹಾಸ ಕಾಲದಲ್ಲಿ ಮೌರ್ಯರ ಶಿಲ್ಪಕೃತಿಗಳು ಅತ್ಯಂತ ಪ್ರಾಚೀನವಾದವುಗಳು. ಕಲ್ಲಿನ ಸ್ಥಂಭಗಳ ಮೇಲಿನ ವೃಷಭ, ಆನೆ, ಸಿಂಹ, ಕುದುರೆ ಮೊದಲಾದ ಆಕೃತಿಗಳು ಪ್ರಮುಖವಾದವು.[೮] ಮೌರ್ಯರ ಶಕ್ತಿಯು ಇಳಿಮುಖವಾಗುತ್ತಿದ್ದಂತೆ ಶುಂಗರು, ಕುಶಾನರು, ಕಳಿಂಗರು, ಹಾಗೂ ಗುಪ್ತರ ಕಾಲಗಳಲ್ಲಿ ಮೂರ್ತಿಶಿಲ್ಪಗಳ ರಚನೆಗೆ ಪ್ರೋತ್ಸಾಹ ನೀಡಿದರು. ಅಲ್ಲದೇ ಇದೇ ಕಾಲದಲ್ಲಿ ವಿವಿಧ ಸಂಸ್ಕೃತಿಗಳ ಸಂಗಮವಾದ ಗಾಂಧಾರ ಶಿಲ್ಪಕಲೆಯು ಬೆಳವಣಿಗೆಯಾಯಿತು.[೯]

ಕರ್ನಾಟಕವು ಮೂರ್ತಿಶಿಲ್ಪಗಳ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದೆ. ಮೂರ್ತಿಶಿಲ್ಪಗಳ ಪ್ರಾಚೀನತೆಯನ್ನು ಗಮನಿಸುವುದಾದರೆ ಪಿಕ್ಲಿಹಾಳ್, ಸಂಗನಕಲ್ಲು, ತೆಕ್ಕಲಕೋಟೆ ಮುಂತಾದ ನೆಲೆಗಳಲ್ಲಿ ನೆಡೆಸಿದ ಉತ್ಖನನಗಳಿಂದ ನೂತನ ಶಿಲಾಯುಗದ ನಡುವೆ ಮಣ್ಣಿನ ಮೂರ್ತಿಗಳು ದೊರೆತಿವೆ. ಅವುಗಳು ಅಂದಿನ ಧಾರ್ಮಿಕ ಸ್ಥಿತಿಗತಿಯ ಜೊತೆಗೆ ಕರ್ನಾಟಕ ಮೂರ್ತಿಶಿಲ್ಪದ ಪೂರ್ವಭಾವಿ ಹಂತವನ್ನು ಸೂಚಿಸುತ್ತದೆ. ನಂತರ ಚಾರಿತ್ರಿಕ ಯುಗದಲ್ಲಿ ಶಾತವಾಹನರು, ಕದಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು ಮತ್ತು ವಿಜಯನಗರದ ಅರಸರು ಮೂರ್ತಿಶಿಲ್ಪದ ಬೆಳವಣಿಗೆಗೆ ಪ್ರೋತ್ಸಾಹ ನೀಡಿದರು.[೧೦]

ದೇವಾಲಯಗಳ ಅವಿಭಾಜ್ಯ ಅಂಗಗಳಾದ ಮೂರ್ತಿಶಿಲ್ಪಗಳು ತಮಟಕಲ್ಲು ಪರಿಸರದಲ್ಲಿ ಕಂಡುಬರುತ್ತವೆ.

## ಶೈವ ಶಿಲ್ಪಗಳು

ಪ್ರಸ್ತುತ ಸಂಶೋಧನ ಪ್ರದೇಶವಾದ ತಮಟಕಲ್ಲು ಪ್ರದೇಶದಲ್ಲಿ ಹೆಚ್ಚಿನದಾಗಿ ಶೈವ ಶಿಲ್ಪಗಳು ದೇವಾಲಯಗಳಲ್ಲಿ ಇಂದಿಗೂ ಸಹ ಪೂಜಿಸಲ್ಪಡುತ್ತಿದ್ದು ಸುರಕ್ಷಿತವಾಗಿವೆ. ಆದರೆ ಕೆಲವೊಂದು ಬಿಡಿ ಶಿಲ್ಪಗಳ ರೂಪದಲ್ಲಿದ್ದು ದೇವಾಲಯದ ಹೊರಗಡೆ, ಪಾಳು ಜಾಗಗಳಲ್ಲಿ, ಬೆಟ್ಟ ಮತ್ತು ಗುಹೆಗಳಲ್ಲಿ, ಜಮೀನುಗಳಲ್ಲಿ ಕಾಣುತ್ತೇವೆ. ಶೈವ ಶಿಲ್ಪಗಳಲ್ಲಿ ಹೆಚ್ಚಾಗಿ ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ನಂದಿ ಮತ್ತು ಶಿವಲಿಂಗಗಳನ್ನು ಹೆಚ್ಚಾಗಿ ಕಾಣುತ್ತೇವೆ.

ಶಿಲ್ಪ : ನಂದಿ

ಸ್ಥಳ : ಎಡೆಕಲ್ಲು ಬೆಟ್ಟದ ಮೇಲೆ

ಊರು : ತಮಟಕಲ್ಲು

ಶಿಲೆ : ಕೆಂಪು ಶಿಲೆ

ಕಾಲಮಾನ : ಕ್ರಿ.ಶ. ಸು ೨೦ನೇ ಶತಮಾನ

ತಮಟಕಲ್ಲು ಗ್ರಾಮದ ಪ್ರಸಿದ್ಧ ಎಡೆಕಲ್ಲು ಬೆಟ್ಟದ ಮೇಲೆ ಈ ಶಿಲ್ಪವು ಸ್ಥಾಪಿತವಾಗಿದೆ. ಈ ಮೂರ್ತಿಶಿಲ್ಪವು ಶೈವ ಪಂಥಕ್ಕೆ ಸೇರಿದ್ದು, ಇದು ಗ್ರಾಮದ ಮಧ್ಯಭಾಗದಲ್ಲಿರುವ ಈಶ್ವರನ ದೇವಾಲಯಕ್ಕೆ ಅಂದರೆ ಉತ್ತರಕ್ಕೆ ಅಭಿಮುಖ ಮಾಡಿದೆ. ನಂದಿಯು ನಾಲ್ಕು ಕಾಲುಗಳನ್ನು ಹೊಂದಿದ್ದು, ಮುಂದಿನ ಎಡಗಾಲನ್ನು ಮುಂದೆ ಚಾಚಿದೆ. ನಂದಿಯು ಹಣೆಯಲ್ಲಿ ಪಟ್ಟಿಕೆ ಮತ್ತು ಕೊರಳಲ್ಲಿ ಹಾರ, ಕಾಲಲ್ಲಿ ಕಾಲ್ಗಡಗ , ಬೆನ್ನಿನ ಮೇಲೆ ಪಟ್ಟಿಕೆಯನ್ನು ಹಾಕಲಾಗಿದೆ. ನಂದಿಯು ಉಬ್ಬಿದ ಕಣ್ಣು ಮತ್ತು ಕಿವಿಗಳನ್ನು ಹೊಂದಿದೆ. ಇದರ ಮೇಲೆ ಹಾವಿನ ಎಡೆಯ ಆಕಾರದ ರೀತಿಯಲ್ಲಿ ಕಲ್ಲು ಇದರ ಮೇಲೆ ಬಾಗಿದೆ ಇದರ ಮೇಲೆ ನಿಂತುಕೊಂಡು ಗ್ರಾಮದ ಸಮಗ್ರ ನೋಟವನ್ನು ಕಾಣಬಹುದು ಆದರೆ ಇದು ತುಂಬಾ ಅಪಾಯಕಾರಿ ಸ್ಥಳವಾಗಿದೆ.

ಶಿಲ್ಪ : ಶಿವಲಿಂಗ

ಸ್ಥಳ : ಈಶ್ವರ ದೇವಾಲಯ

ಊರು : ತಮಟಕಲ್ಲು

ಶಿಲೆ : ಕಪ್ಪು ಶಿಲೆ

ಕಾಲಮಾನ : ಕ್ರಿ.ಶ.ಸು. ೧೮ನೇ ಶತಮಾನ

ತಮಟಕಲ್ಲು ಗ್ರಾಮದ ಪ್ರಮುಖ ದೇವಾಲಯಗಳಲ್ಲಿ ಈಶ್ವರ ದೇವಾಲಯವು ಒಂದಾಗಿದೆ. ಇದು ಶೈವ ಪಂಥಕ್ಕೆ ಸೇರಿದ ಮೂರ್ತಿಶಿಲ್ಪವಾಗಿದ್ದು, ದಕ್ಷಿಣಕ್ಕೆ ಅಭಿಮುಖವಾಗಿರುವ ಈ ದೇವಾಲಯದ ಗರ್ಭಗುಡಿಯಲ್ಲಿ ಪೀಠದ ಮೇಲೆ ಶಿವಲಿಂಗವನ್ನಿಟ್ಟು ಪೂಜೆಯನ್ನು ಮಾಡುವರು. ಈಶ್ವರನ ಮೂರ್ತಿ ಶಿಲ್ಪವು ಮೂರು ಅಡಿಗಳನ್ನು ಹೊಂದಿದೆ. ಇದರ ಸುತ್ತಲೂ ತಾಮ್ರದ ಪ್ರಭಾವಳಿಯನ್ನಿಟ್ಟು ಅಲಂಕಾರ ಮಾಡಲಾಗಿದೆ. ಹಾಗೂ ಈ ಮೂರ್ತಿ ಶಿಲ್ಪದ ಮುಂಭಾಗದಲ್ಲಿ ಇದಕ್ಕೆ ಅಭಿಮುಖ ಮಾಡಿದ ರೀತಿಯಲ್ಲಿ ನಂದಿಯ ಶಿಲ್ಪವನ್ನು ನೋಡಬಹುದಾಗಿದೆ. ನಂದಿಯು ನಾಲ್ಕು ಕಾಲುಗಳನ್ನು ಹೊಂದಿದ್ದು ಇದು ಶಿವಲಿಂಗಕ್ಕೆ ಎದುರು ಮುಖ ಮಾಡಿದೆ.

ಶಿಲ್ಪ : ನಂದಿ ಶಿಲ್ಪಗಳು

ಊರು : ತಮಟಕಲ್ಲು

ಸ್ಥಳ : ಗ್ರಾಮದ ಸಮೀಪ

ಶಿಲೆ : ಕಪ್ಪು

ಕಾಲಮಾನ : ಕ್ರಿ.ಶ. ಸು ೧೮-೧೯ನೇ ಶತಮಾನ

ತಮಟಕಲ್ಲು ಗ್ರಾಮದ ಪೂರ್ವ ದಿಕ್ಕಿನಲ್ಲಿ ಅಶೋಕ ಎಂಬುವವರ ಹೊಲದ ಬದುವಿನಲ್ಲಿ ಕಂಡುಬರುವ ನಂದಿ ಶಿಲ್ಪವಾಗಿದೆ. ಇದು ಎರಡುವರೆ ಅಡಿ ಉದ್ದ ಮತು ಒಂದು ಅಡಿ

ಅಗಲವನ್ನು ಹೊಂದಿದೆ. ಈ ವಿಗ್ರಹವು ತೃಟಿತಗೊಂಡು ಭೂಮಿಯಲ್ಲಿ ಅರ್ಧ ಅಡಿಗಳಷ್ಟು ಒಳಗಡೆ ಇರುವುದನ್ನು ನೋಡಬಹುದಾಗಿದೆ. ಈ ಶಿಲ್ಪವು ಪೂರ್ವಕ್ಕೆ ಅಭಿಮುಖವಾಗಿದೆ.

ಶಿಲ್ಪ : ನಂದಿ ಶಿಲ್ಪಗಳು

ಸ್ಥಳ : ಗ್ರಾಮದ ಸಮೀಪ

ಊರು : ತಮಟಕಲ್ಲು

ಶಿಲೆ : ಕಪ್ಪು

ಕಾಲಮಾನ : ೧೭-೧೮ನೇ ಶತಮಾನ

ತಮಟಕಲ್ಲು ಮತ್ತು ಆಯಿತೋಳು ಗ್ರಾಮದ ಮಧ್ಯದಲ್ಲಿ ಪಶ್ಚಿಮಕ್ಕೆ ಒಂದು ಕಿಲೋ ಮೀಟರ್ ಅಂತರದಲ್ಲಿ ಕಂಡುಬರುವ ಸೋಮಪ್ಪನ ಗುಡ್ಡದಲ್ಲಿ ಎರಡು ಗುಹೆಗಳು ಕಂಡುಬರುತ್ತವೆ. ಆ ಗುಹೆಯ ಒಳಗಡೆ ಎರಡು ಅಡಿ ಉದ್ದ ಮತ್ತು ಒಂದು ಅಡಿಯಷ್ಟು ಅಗಲವನ್ನು ಹೊಂದಿರುವ ನಂದಿಯ ವಿಗ್ರಹ ಕಂಡುಬರುತ್ತದೆ. ಇದು ನಾಲ್ಕು ಕಾಲುಗಳನ್ನು ಹೊಂದಿದ್ದು ಸಂಪೂರ್ಣ ತೃಟಿತಗೊಂಡಿದೆ. ಇದರ ಅಭಿಮುಖವಾಗಿ ಒಂದು ಅಡಿಯ ಶಿವಲಿಂಗವನ್ನು ಕಾಣಬಹುದಾಗಿದೆ.

## ವೈಷ್ಣವ ಶಿಲ್ಪಗಳು

ತ್ರಿಮೂರ್ತಿಯಲ್ಲಿ ಒಬ್ಬನಾದ ವಿಷ್ಣು ವೈಷ್ಣವ ಧರ್ಮದ ಪ್ರಮುಖ ದೇವ. ಸೃಷ್ಠಿಯ ಸಂರಕ್ಷಣೆಯ ದೇವರಾದ ಈತನು ಅನೇಕ ಅವತಾರವೆತ್ತಿದ ಬಗ್ಗೆ ಪುರಾಣಗಳ ಉಲ್ಲೇಖಿಸಿದೆ. ಪ್ರಸ್ತುತ ಅಧ್ಯಯನ ಕ್ಷೇತ್ರವಾದ ತಮಟಕಲ್ಲು ಪರಿಸರದಲ್ಲಿ ವೈಷ್ಣವ ಶಿಲ್ಪಗಳನ್ನು ಕಾಣುತ್ತೇವೆ.

ಶಿಲ್ಪ : ಆಂಜನೇಯ

ಸ್ಥಳ : ಆಂಜನೇಯ ದೇವಾಸ್ಥಾನದ ಒಳಗೆ

ಊರು : ತಮಟಕಲ್ಲು

ಕಾಲ : ೧೮ನೇ ಶತಮಾನ

ಬಳಸಿದ ಶಿಲೆ : ಕಪ್ಪು

ತಮಟಕಲ್ಲು ಗ್ರಾಮದ ಪ್ರಸಿದ್ಧ ದೇವಾಲಯವಾದ ಆಂಜನೇಯ ದೇವಾಲಯದ ಗರ್ಭ ಗೃಹದಲ್ಲಿ ಸುಮಾರು ಆರು ಅಡಿ ಎತ್ತರದಲ್ಲಿ ಈ ವಿಗ್ರಹವನ್ನು ನಾವು ನೋಡಬಹುದಾಗಿದೆ. ಆಂಜನೇಯನ ಮೂರ್ತಿಶಿಲ್ಪವು ತ್ರಿಭಂಗಿಯಲ್ಲಿದ್ದು ಕಿವಿಯಲ್ಲಿ ಪತ್ರಕುಂಡಲ ಕೊರಳಲ್ಲಿ ಕಂಠಹಾರ, ನೀಳಹಾರ, ಸೊಂಟದಲ್ಲಿ ದೋತಿಯನ್ನು ಮೊಣಕಾಲಿನವರೆಗೂ ಧರಿಸಿರುವನು. ತನ್ನ ಬಲಗೈಯನ್ನು ಮೇಲೆತ್ತಿರುವನು ಮತ್ತು ಎಡಗೈಯನ್ನು ಎದೆಯ ಮುಂಭಾಗ ಮಡಚಿಕೊಂಡಿರುವನು. ತೋಳಲ್ಲಿ ಬಾಹು ಹೊಳೆಯ, ಕೈಯಲ್ಲಿ ಕೈಕಡಗ, ಮತ್ತು ಕಿಂಕಿಣಿಯನ್ನು ಹಾಗೂ ನೀಳವಾದ ವನಮಾಲವನ್ನು

ಧರಿಸಿರುವನು. ಆಂಜನೇಯನ ಮೂರ್ತಿ ಶಿಲ್ಪದ ಹಿಂದೆ ಸುಂದರವಾದ ಅಲಂಕಾರವಾದ ಪ್ರಭಾವಳಿ ಇದೆ ಇದರ ಮಧ್ಯಭಾಗದಲ್ಲಿ ಕೀರ್ತಿಮುಖ ಇದೆ. ಪ್ರತಿ ಶನಿವಾರ ವಿಶೇಷ ಪೂಜೆಯ ಜೊತೆಗೆ ಹರಕೆಯನ್ನ ಭಕ್ತರು ಬೇಡಿಕೊಳ್ಳುವರು ಅವರ ನಂಬಿಕೆಯ ಪೂರಕವಾಗಿ ಮೂರ್ತಿಶಿಲ್ಪದ ಮೇಲಿರುವ ಹೂಗಳನ್ನು ಭಕ್ತರಿಗೆ ನೀಡುವುದರ ಮೂಲಕ ತನ್ನ ನಂಬಿಕೆಯನ್ನು ವಿಸ್ತರಿಸಿದೆ. ಈ ಮೂರ್ತಿಶಿಲ್ಪವೂ ವರ್ಷದಿಂದ ವರ್ಷಕ್ಕೆ ಬೆಳೆಯುತ್ತದೆ ಎಂಬುದು ಸ್ಥಳೀಯರ ನಂಬಿಕೆಯಾಗಿದೆ.

ಶಿಲ್ಪ : ಆಂಜನೇಯ ಮತ್ತು ಸಿದ್ಧಲಿಂಗ ಶಿಲ್ಪಗಳು

ಊರು : ತಮಟಕಲ್ಲು

ಸ್ಥಳ : ಗ್ರಾಮದ ಸಮೀಪ

ಶಿಲೆ : ಕಪ್ಪು

ಕಾಲಮಾನ : ಕ್ರಿ.ಶ ಸುಮಾರು ೧೮ನೇ ಶತಮಾನ

ತಮಟಕಲ್ಲು ಗ್ರಾಮದ ಪಶ್ಚಿಮಕ್ಕೆ ಎರಡು ಕಿಲೋ ಮೀಟರ್ ಅಂತರದಲ್ಲಿ ಈ ಶಿಲ್ಪಗಳು ಕಂಡುಬರುತ್ತವೆ. ಇಲ್ಲಿ ಎರಡು ಅಡಿ ಎತ್ತರದ ಆಂಜನೇಯನ ಶಿಲ್ಪವನ್ನು ಕಾಣುತ್ತೇವೆ. ಈ ಶಿಲ್ಪವು ಭಗೀರಕಲ್ಲು ಎಂಬ ಪ್ರದೇಶದಲ್ಲಿ ಉದ್ಭವವಾದ ಮೂರ್ತಿಶಿಲ್ಪವೆಂದು ಸ್ಥಳೀಯರ ನಂಬಿಕೆಯಾಗಿದೆ. ಇದನ್ನು ಗ್ರಾಮಸ್ಥರು ಪುಟದಕಟ್ಟೆ ಆಂಜನೇಯ ಎಂದು ಕರೆಯುವರು. ಆಂಜನೇಯನು ಸಮಭಂಗಿಯಲ್ಲಿ ನಿಂತಿದ್ದು, ತಲೆಯಲ್ಲಿ ಕಿರೀಟ, ಕಿವಿಯಲ್ಲಿ ಪತ್ರಕುಂಡಲ, ಕೊರಳಲ್ಲಿ ಹಾರ, ತೋಳಲ್ಲಿ ಬಾಹುಹೊಳೆಯ, ಕೈಯಲ್ಲಿ ಕೈಗಡಗ, ಕಾಲಲ್ಲಿ ಕಾಲ್ಗಡಗ ಹೊಂದಿರುವನು. ಹಾಗೂ ತನ್ನ ಬಾಲವನ್ನು ಬಲಭಾಗಕ್ಕೆ ಮೇಲಕ್ಕೆ ಎತ್ತಲಾಗಿದೆ. ಆಂಜನೇಯನ ಬಲಗೈಯು ಅಭಯ ಮುದ್ರೆಯಲ್ಲಿದ್ದು ಎಡಗೈಯಲ್ಲಿ ಗದೆಯನ್ನು ಹಿಡಿದಿರುವನು. ಆಂಜನೇಯನು ಸೊಂಟದಿಂದ ಮೊಣಕಾಲೀನವರೆಗೆ ದೋತಿಯನ್ನು ಧರಿಸಿರುವನು. ಇದನ್ನು ಗ್ರಾಮಸ್ಥರು ಪುಟದಕಟ್ಟೆ ಆಂಜನೇಯ ಎಂದು ಕರೆಯುವರು. ಇದರ ಜೊತೆಯಲ್ಲಿ ಸಿದ್ಧಲಿಂಗ ದೇವರ ವಿಗ್ರಹವನ್ನು ಕಾಣುತ್ತೇವೆ. ಇವುಗಳು ಸುಮಾರು ನಾಲ್ಕು ತಲೆಮಾರಿಗಿಂತಲೂ ಹಳೆಯ ಶಿಲ್ಪಗಳು ಎಂದು ಸ್ಥಳೀಯರ ಅಭಿಪ್ರಾಯವಾಗಿದೆ.

## ಶಾಕ್ತ ಶಿಲ್ಪಗಳು

ಮಾತೃದೇವತೆಯ ರೂಪದಲ್ಲಿರುವ ಶಕ್ತಿ ದೇವತೆಯನ್ನು ಆರಾಧಿಸುವ ಪಂಥವನ್ನು ಶಾಕ್ತಪಂಥವೆಂದು ಕರೆಯುತ್ತೇವೆ. ಭಾರತದಲ್ಲಿ ಶಾಕ್ತ ಪಂಥದ ಚರಿತ್ರೆಯನ್ನು ಸಿಂಧೂ ಸಂಸ್ಕೃತಿಯಿಂದ ಗುರುತಿಸಲಾಗಿದೆ. ಮುಖ್ಯವಾಗಿ ಹರಪ್ಪ, ಕಾಲಿಬಂಗಾನ್, ಮೆಹೆಂಜೋದಾರೋ ಮೊದಲಾದ ಸ್ಥಳಗಳಲ್ಲಿ ನೆಡೆಸಿದ ಉತ್ಖನನದಿಂದ ಮಾತೃ ರೂಪದ ದೇವತೆಗಳು ದೊರೆತವು. ಇವುಗಳ

ಆಧಾರದಿಂದ ಶಾಕ್ತ ಶಿಲ್ಪಗಳ ಆರಾಧನೆ ಪ್ರಾರಂಭವಾಯಿತು. ಶಾಕ್ತರ ಆರಾಧ್ಯ ದೇವತೆಯಾದ ಶಕ್ತಿದೇವತೆಯನ್ನು ಅನೇಕ ಹೆಸರಿನಿಂದ ಕರೆಯಲಾಗಿದೆ.

**ಉಡುಸಲಮ್ಮ**

ಈ ಮೂರ್ತಿ ಶಿಲ್ಪವು ಶಾಕ್ತ ಪಂಥಕ್ಕೆ ಸೇರಿದ್ದು ಇದು ಸುಮಾರು ಕ್ರಿ.ಶ ೨೦-೨೧ ನೇ ಶತಮಾನದ ಕಾಲಮಾನದ್ದಾಗಿದೆ. ಗರ್ಭಗೃಹದಲ್ಲಿ ದೇವಿಗೆ ಕೀರ್ತಿಮುಖವನ್ನು ಹೊಂದಿದ್ದು ದೇವಿಯನ್ನು ವಸ್ತ್ರದಿಂದ ಅಲಂಕಾರ ಗೊಳಿಸಿದ್ದು, ಬೆಳ್ಳಿಯ ಮುಖವಾಡವನ್ನು ಇಟ್ಟಿರುವರು. ಈ ದೇವತೆಯು ತಮಟಕಲ್ಲು ಗ್ರಾಮದ ದೇವತೆಯಾಗಿ ಮತ್ತು ಶಕ್ತಿ ದೇವತೆಯಾಗಿ ಮಹತ್ವವನ್ನು ಹೊಂದಿದೆ.

**ತೊಳಸಮ್ಮ**

ಈ ದೇವತೆಯು ಶಾಕ್ತ ಪಂಥಕ್ಕೆ ಸೇರಿದ್ದು, ಇದರ ಕಾಲಮಾನ ಸುಮಾರು ಕ್ರಿ.ಶ ೨೦-೨೧ನೇ ಶತಮಾನಕ್ಕೆ ಸೇರಿದ ದೇವಾಲಯವಾಗಿದೆ. ಇದು ಪೂರ್ವಕ್ಕೆ ಅಭಿಮುಖ ಮಾಡಿರುವ ಮೂರ್ತಿಶಿಲ್ಪವಾಗಿದೆ. ಗರ್ಭಗೃಹದಲ್ಲಿ ದೇವಿಗೆ ಕೀರ್ತಿಮುಖವನ್ನು ಹೊಂದಿದ್ದು ವಸ್ತ್ರದಿಂದ ಅಲಂಕಾರಗೊಳಿಸಲಾಗಿದೆ. ಈ ದೇವರ ಮತ್ತೊಂದು ವಿಗ್ರಹವು ರಂಗಸ್ವಾಮಿ ಬೆಟ್ಟದಲ್ಲಿಟ್ಟು ಪೂಜೆ ಮಾಡುವುದು ಸ್ಥಳೀಯರ ನಂಬಿಕೆಯಾಗಿದೆ. ಪ್ರತಿ ಮಂಗಳವಾರ ದೇವಾಲಯದಲ್ಲಿ ಪೂಜೆಯನ್ನು ನೆಡೆಸಲಾಗುತ್ತದೆ.

**೩.೩ ಶಾಸನ ಮತ್ತು ಸ್ಮಾರಕ ಶಿಲ್ಪಗಳು**

**ಶಾಸನ ಎಂದರೇನು? ಶಾಸನಗಳ ಅರ್ಥ**

ಬಹುಕಾಲ ಉಳಿಯುವ ಶಿಲೆ, ಕಲ್ಲು, ತಾಮ್ರ ಮುಂತಾದ ಲೋಹಗಳ ಮೇಲೆ ಕೊರೆಯಲ್ಪಟ್ಟ, ಬರಹಗಳೇ ಶಾಸನಗಳೆಂದು ಕರೆಯುತ್ತಾರೆ.[೧೧] 'ಶಾಸನ' ಎಂಬ ಸಂಸ್ಕೃತ ಪದಕ್ಕೆ ಆಜ್ಞೆ (ರಾಜಾಜ್ಞೆ) ಎಂಬುದು ಮೂಲಾರ್ಥ, ಶಾಸ್ ಎಂಬ ಧಾತುವಿಗೆ ಆಜ್ಞಾಪಿಸು, ಶಿಕ್ಷಿಸು, ನಿಯಂತ್ರಿಸು ಎಂಬ ಅರ್ಥಗಳಿವೆ. 'ಶಾಸನ' ಎಂಬುದಕ್ಕೆ ಈಗಲೂ 'ಕಾನೂನು' ಎಂಬ ಅರ್ಥ ಪ್ರಚಲಿತವಾಗಿರುವುದನ್ನು ಗಮನಿಸಬಹುದು.೧೨ ಪ್ರಾಚೀನ ಭಾರತದ ಆಡಳಿತ ಪದ್ಧತಿಯ ಬಗ್ಗೆ ತಿಳಿಸುವ ಗ್ರಂಥಗಳಾದ ಶುಕ್ರನೀತಿ ಸಾರ, ಕೌಟಿಲ್ಯನ ಅರ್ಥಶಾಸ್ತ್ರ ಮುಂತಾದ ಗ್ರಂಥಗಳು 'ಶಾಸನ' ಎಂಬ ಪದವನ್ನು ರಾಜಾಜ್ಞೆ ಎಂಬ ಅರ್ಥದಲ್ಲಿ ಪ್ರಯೋಗ ಮಾಡಿದೆ.[೧೨] ಶಾಸನ ಎಂಬುವುದು ಮೂಲಭೂತವಾಗಿ ದಾನಕ್ಕೆ ಸಂಬಂಧಪಟ್ಟ ರಾಜಾಜ್ಞೆಯಾಗಿತ್ತು. ಶಾಸನಕ್ಕೆ ಸಮಾನಾರ್ಥದಲ್ಲಿ ಬಳಕೆಯಾಗುತ್ತಿರುವ ಇಂಗ್ಲೀಷ್ ಶಬ್ಧ ಎಂದರೆ Incription, ಮುಂದೆ ಅದನ್ನು Inscribe ಎಂದು ಕರೆದರು. Inscribe ಎಂದರೆ ಕೆತ್ತುವುದು ಎಂಬ ಅರ್ಥವಾಗಿದೆ.[೧೩] ಈ ವ್ಯಾಪಕ ಅರ್ಥದಲ್ಲಿ ಡಿ.ಸಿ. ಸರ್ಕಾರ್‌ರವರು 'ಶಾಸನವೆಂದರೆ ಯಾವುದಾದರೊಂದು ಪದಾರ್ಥದ ಮೇಲೆ ಕೊರೆದ ಯಾವುದೇ

ಬರಹವೆಂದು ಅಕ್ಷರ ಅರ್ಥವಾಗುತ್ತದೆ ಎಂದಿದ್ದಾರೆ.[೪] ಶಾಸನಗಳನ್ನು ಕೇವಲ ಸಂಕುಚಿತ ಅರ್ಥದಲ್ಲಿ ಬಳಕೆ ಮಾಡದೆ ಅದನ್ನು ವಿಶಾಲಾರ್ಥದಲ್ಲಿ ಬಳಕೆ ಮಾಡಿದ್ದಾರೆ, ಶಾಸನವು ಇತಿಹಾಸದ ಆಧಾರಕ್ಕೆ ಮೂಕ ಸಾಕ್ಷಿಯಾಗಿದೆ. ಕೇವಲ ಸಾಹಿತ್ಯ ನಿರ್ಮಾಣ ಮಾತ್ರ ಶಾಸನಗಳ ಉದ್ದೇಶವಾಗಿರದೆ, ದಾನ ಶಾಸನ, ಪ್ರಶಸ್ತಿ ಶಾಸನ, ವೀರಗಲ್ಲು, ಮಹಾಸತಿಗಲ್ಲು, ರಾಜಾಜ್ಞೆಗಳು ಅಥವಾ ಆಡಳಿತ ವ್ಯವಸ್ಥೆಯ ಹೊರಡಿಸಿರುವ ಆಜ್ಞೆಗಳು, ಮುಂತಾದ ವಿಶಾಲಾರ್ಥದಲ್ಲಿ ಶಾಸನಗಳು ತನ್ನ ಕೊಡುಗೆಯನ್ನು ನೀಡತ್ತಾ ಬಂದಿವೆ.[೫] ಶಾಸನ ಒಂದು ಐತಿಹಾಸಿಕ ಮತ್ತು ಪಾರಂಪರಿಕ ಮಾಹಿತಿಯನ್ನು ನೀಡುವ ಆಧಾರವೆಂದೇ ಎಂದು ಹೇಳಬಹುದು.

**ಶಾಸನ ಉದ್ದೇಶ**

ಶಾಸನಗಳನ್ನು ಉದ್ದೇಶ ದಾನ-ದತ್ತಿಗಳನ್ನು ತಳಿಸುವುದು ರಾಜನ ಪ್ರಶಸ್ತಿಯನ್ನು ವರ್ಣಿಸುವುದು ಆಗಿದ್ದರೂ, ಅಂದಿನ ಸಂಸ್ಕೃತಿಯನ್ನು ತಿಳಿದುಕೊಳ್ಳುವುದು ಇದರ ಮುಖ್ಯ ಉದ್ದೇಶ ಶಾಸನಗಳಲ್ಲಿ ಕಾಲನಿರ್ದೇಶನಗಳಲ್ಲಿದಿದ್ದರೂ ಲಿಪಿ ದೃಷ್ಠಿಯಿಂದ ಕಾಲನಿರ್ದೇಶನ ಮಾಡುವುದು ಇದರ ಇನ್ನೊಂದು ವಿಶೇಷತೆ. ಈ ಶಾಸನಗಳು ಸಮಕಾಲೀನ ದಾಖಲೆಗಳಾಗಿದ್ದರಿಂದ ಕೆಲವೊಮ್ಮೆ ಸಾಹಿತ್ಯಿಕ ಕೃತಿಗಳಲ್ಲಿ ಸಿಗದಂತಹ ಕೆಲವೊಂದು ಘಟನಾವಳಿಗಳು ಶಾಸನಗಳಿಂದ ದೊರೆಯುತ್ತವೆ. ಬೀದಿಗಳಲ್ಲಿ, ಉದ್ಯಾನವನಗಳಲ್ಲಿ ನಾಲ್ಕು ದಾರಿಗಳು ಕೂಡುವ ಸ್ಥಳದಲ್ಲಿ ಬಹುಕಾಲ ಉಳಿಯುವಂತೆ ಶಾನಗಳನ್ನು ನೆಟ್ಟಿರುವುದನ್ನು ಕಾಣುತ್ತೇವೆ. ಶಾಸನ ಅಧ್ಯಯನದಲ್ಲಿ ಗದ್ಯವೇ ಪ್ರಧಾನವಾದರೂ ಭಾಷಾದೃಷ್ಠಿಯಿಂದ, ಲಿಪಿ ದೃಷ್ಠಿಯಿಂದ ನೋಡಿದ್ದಲ್ಲಿ ಇದರ ಚಾರಿತ್ರಿಕ ಬದಲಾವಣೆಯನ್ನು ಗುರುತಿಸಲು ಸಾಧ್ಯವಾಗುತ್ತದೆ.

ಪ್ರಸ್ತುತ ಅಧ್ಯಯನ ವಿಷಯವಾದ ತಮಟಕಲ್ಲು ಪ್ರದೇಶದಲ್ಲಿ ಕಂಡುಬರುವ ಪ್ರಮುಖ ಶಾಸನಗಳನ್ನು ನಾವು ನೋಡಬಹುದಾಗಿದೆ.

**ಶಿಲಾಶಾಸನ-೧**

ಸ್ಥಳ : ತಮಟಕಲ್ಲು

ಕಾಲಮಾನ : ೫ನೇ ಶತಮಾನ

ಪ್ರಮಾಣ : ಎರಡು ಅಡಿ ಅಗಲ ಮತ್ತು ಮೂರುವರೆ ಅಡಿ ಉದ್ದ

ತಮಟಕಲ್ಲು ಗ್ರಾಮದ ಪೂರ್ವದಿಕ್ಕಿನಲ್ಲಿ ಬರುವ ತಳವಾರ ಒಬಜ್ಜ (ಹನುಮಂತಪ್ಪ) ಎಂಬುವವರ ಹೊಲದಲ್ಲಿ ಸರ್ವೆ ನಂಬರ್ ೩೭/೧ರಲ್ಲಿ ಈ ಶಾಸನ ಪತ್ತೆಯಾಗಿದೆ. ಇದು ಕ್ರಿ.ಶ.೫ನೇ ಶತಮಾನದ ಶಾಸನವಾಗಿದೆ. ಈ ಶಾಸನದಲ್ಲಿ ಮಾಸಿಕಾಪುರದ ಅಧಿಪತಿಯಾದ ಧನಾಗಮನ ಮಗ ವಿನಾಗಮ ಇವನ ಮಗ ಗುಣಮಧುರನ ಗುಣಗಳನ್ನು ಹೊಗಳಲಾಗಿದೆ. ಇನ್ನೊಂದು ಶಾಸನದಲ್ಲಿ ಗುಣಮಧುರ ಯುದ್ಧದಲ್ಲಿ ಸತ್ತ ನಂತರ ಅವನನ್ನು ಪ್ರಶಂಸಿಸಿ

ಬರೆಯಲಾಗಿದೆ. ಈ ಪ್ರದೇಶವೇ ಮಾಸಿಕಾಪುರವಾಗಿರಬಹುದೆಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ.

ತಮಟಕಲ್ಲಿನ ವಿಶೇಷವೆಂದರೆ ಇಲ್ಲಿ ಅನೇಕ ಶಿಲಾಶಾಸನಗಳು ದೊರೆತಿವೆ. ಬೆಟ್ಟದ ಪ್ರಸಿದ್ಧ ರಂಗನಾಥಸ್ವಾಮಿ ದೇವಾಲಯದ ಪಕ್ಕದ ಎತ್ತರದ ಬಂಡೆಯ ಕೆಳಗೆ ೧೫ನೇ ಶತಮಾನದ ಶಾಸನವಿದೆ. ಒಂದು ಕಲ್ಲಿನಲ್ಲಿರುವ ಅಕ್ಷರಗಳು ಕನ್ನಡದಲ್ಲಿ ಪದ್ಯ ರೂಪದಲ್ಲಿ ಕೊರೆದ ಪ್ರಥಮ ಶಾಸನವಾಗಿರಬೇಕೆಂದು ಅಭಿಪ್ರಾಯವಿದೆ. ಈ ಶಾಸನವು ಕನ್ನಡದ ವೃತ್ತ ಛಂದಸ್ಸು ಕನಕಾರ್ಜುನಿ ವೃತ್ತ, ಗುಣಮಧುರ ವ್ಯಕ್ತಿಯನ್ನು ವರ್ಣಿಸುತ್ತದೆ. ಜೊತೆಗೆ ಕನ್ನಡ ಭಾಷೆಯ ವೈಶಿಷ್ಟ್ಯತೆಯನ್ನು ಕನ್ನಡ ಬೆಳೆಯುವ ಬಗ್ಗೆ ತಿಳಿಸುತ್ತದೆ ಎಂದು ಡಾ. ಕಲವೀರ ಮನ್ವಚಾರ್ ತಿಳಿಸಿದರು. ತಮಟಕಲ್ಲಿನಲ್ಲಿ ದೊರೆತಿರುವ ಶಾಸನ ಈ ರೀತಿ ಇದೆ.

ಬಿಣಮಣಿ ಅನ್ತುಭೋಗಿ ಬಿಣದುಳ್ಮ್ಣಿಲ್ಮನದೋನ್
ರಣಮುಖದುಳ್ಳ ಕೋಲಂ ನೆರಿಯರ್ಕ್ಕು ಮನನ್ದ್ಯದುಣನ್
ಪ್ರಣಯಿಜನಕ್ಕೆ ಕಾಮನರಸಿ ತೋಟ್ಟಿಲವರ್ಣ್ಣನವನ್
ಗುಣಮಧುರಾಂಕ್ಕ ದಿವುಪುರುಷನ್ಪುರುಷ ಪ್ರವರನ್

ಗುಣಮಧುರ ಎಂಬ ವ್ಯಕ್ತಿಯನ್ನು ವರ್ಣಿಸುತ್ತದೆ. ಹಾಗೂ ಅವನ ವ್ಯಕ್ತಿತ್ವವನ್ನು ತಿಳಿಸಲಾಗಿದೆ. ಗುಣಮಧುರ ಎಂಬ ವ್ಯಕ್ತಿಯು ಯಾಚಕರಿಗೆ ಬೇಡಿದ್ದನೆಲ್ಲಾ ಕೊಡುತ್ತಾನೆ. ಯಾವ ರೀತಿಯಾಗಿ ಕೊಡುತ್ತಾನೆಂದರೆ ಹಾವಿನ ಮಣಿ ಕೊಟ್ಟಂತೆ ದ್ವಂದ್ವ ಮನಸ್ಸಿನಿಂದಾಗಲಿ ಅಥವಾ ದ್ವೇಷ ಅಸೂಯೆ ಇಲ್ಲದಂತೆ ಬೇಡಿದವರಿಗೆ ನೀಡುತ್ತಾನೆ ದಿವ್ಯ ಪುರುಷನು ಪುರುಷರಲ್ಲಿಯೇ ಶ್ರೇಷ್ಠ ಯುದ್ಧದಲ್ಲಿ ಇವನನ್ನು ಎದುರಿಸುವ ಶಕ್ತಿ ಯಾರಿಗೂ ಇಲ್ಲ ಬೆರಳು ಮಾಡಿ ತೋರಿಸುವಂತಹ ಕೆಟ್ಟ ಗುಣಗಳು ಅವನಲ್ಲಿ ಇರಲಿಲ್ಲ ಯಾವುದೇ ರೀತಿಯ ನಿಂದಿಸುವ ಕೆಟ್ಟ ಗುಣ ಅಪಖ್ಯಾತಿ ಹೊಂದದೇ ಇರುವಂತಹ ಗುಣ ಹೊಂದಿದ್ದಾನೆ ಪ್ರೀತಿಸುವ ಮೋಹಿಸುವ ಹುಡುಗಿಯರಿಗೂ ದ್ವೇಷಿಸುವ ಹುಡುಗಿಯರಿಗೂ ಅವನು ಸುಂದರವಾದ ಮನ್ಮಥನ ರೀತಿಯಲ್ಲಿದ್ದಾನೆ ಅಥವಾ ಕಾಮನೆ ಕೃಷ್ಣ ವರ್ಣದ ಬಣ್ಣ ಹೊಂದಿದವನು. ಒಟ್ಟಾರೆ ಗುಣಮಧುರನ ಬಾಹ್ಯ ಮತ್ತು ಆಂತರಿಕ ಗುಣಗಳನ್ನು ತಿಳಿಸಲಾಗಿದೆ.[೧೬]

ಅಲ್ಲಿಯೇ ದೊರೆತಿರುವ ಬಂಡೆಬರಹ. ತಮಟಕಲ್ಲು ಗುಡ್ಡದಲ್ಲಿ ಮಾಳನಾಯಕನ ಮಗ ಬುಸಿಯನಾಯಕನೆಂಬುವನು ತಮಂಡಿಯಕಲ್ಲು ನರಸಿಂಹದೇವರ ಗುಹಾಲಯಕ್ಕೆ ಕಲ್ಲುಹಾದಿಯನ್ನು ಮಾಡಿಸಿದುದನ್ನು ಅರುಹುತ್ತದೆ. ಈ ಬರಹದ ಬುಡದಲ್ಲಿ ಬಿಲ್ಲು-ಬಾಣ ಸಹಿತವಿರುವ ಬುಸಿಯನಾಯಕನ ರೇಖಾಕೃತಿಯೂ ಇದೆ. ಈ ಬಂಡೆಬರಹದ ಕಾಲಮಾನ ೧೮ನೇ ಶತಮಾನ. ಇಲ್ಲಿರುವ ಬಂಡೆಗಳ ಮೇಲೆ ಕೆಲವು ಬರಹಗಳೂ ಮಂಡಲಾಕೃತಿ, ಜ್ಯಾಮಿತಿಯಾಕೃತಿ ಮತ್ತಿತರ ತಂತ್ರಸಂಬಂಧಿ ಸಂಕೇತಗಳುಳ್ಳ ರೇಖಾಕೃತಿಗಳೂ ಕಂಡುಬರುತ್ತವೆ. ಈ ಸಂಕೇತಗಳೊಡನೆ ಈ ದೇವನೆಲೆಯ ನಿಗೂಢತೆಯನ್ನು ಇನ್ನಷ್ಟು ಉದ್ದೀಪಿಸುವ ಪ್ರಯತ್ನ ಕೈಗೊಂಡತೆ ಕಾಣಿಸುತ್ತದೆ.೧೭

ತಮಟಕಲ್ಲು ಪರಸರವು ಶಾಸನಗಳು ನೈಜ ಘಟನೆಗಳಿಗೆ ಸಾಕ್ಷಿಯಾಗಿರುವುದರಿಂದ ತನ್ನ ಐತಿಹಾಸಿಕ ಮಹತ್ವವನ್ನು ಹೆಚ್ಚಿಸಿಕೊಳ್ಳುವ ಜೊತೆಗೆ ಸಾಹಿತ್ಯಿಕ ಐತಿಹಾಸಿಕ ಮಹತ್ವಕ್ಕೆ ಯೋಗ್ಯವಾದ ಸ್ಥಳವೆಂದು ಹೇಳಬಹುದು.

ತಮಟಕಲ್ಲು ಪರಿಸರದಲ್ಲಿ ರಂಗನಾಥ ಬೆಟ್ಟದ ಮುಂಭಾಗದಲ್ಲಿ ಪಾಳೆಗಾರರ ಕಾಲದ ಬಂಡೆಬರಹಗಳನ್ನು ಕಾಣುತ್ತೇವೆ ಇದರಿಂದ ಪಾಳೆಗಾರರ ಆಡಳಿತ ನಿಯಂತ್ರಣಕ್ಕೆ ಒಳಪಟ್ಟ ಪ್ರದೇಶವೆಂದು ತಿಳಿಯಬಹುದು. ಹಾಗೆಯೇ ತಮಟಕಲ್ಲು ಗ್ರಾಮವು ಪಾಳೆಗಾರರ ಕಾಲದಲ್ಲಿ ಶತ್ರು ಪಡೆಯಿಂದ ರಕ್ಷಿಸುವ ಪ್ರಮುಖ ಕೇಂದ್ರವಾಗಿ ನೋಡಬಹುದು ಏಕೆಂದರೆ ಈ ಬೆಟ್ಟದ ಮುಂಭಾಗವಿರುವ ಬೃಹತ್ ಕಲ್ಲಿನ ಮೇಲೆ ಸೈನಿಕರು ಕುಳಿತುಕೊಂಡು ತಮಟೆಯ ಶಬ್ಧದ ಮೂಲಕ ಮಾಹಿತಿಯನ್ನು ನೀಡುತ್ತಿದ್ದರು ಎಂಬ ಕಲ್ಪನೆ ಇದೆ ಹಾಗಾಗಿ ತಮಟಕಲ್ಲು ಪರಿಸರವು ಪಾಳೆಗಾರರ ಕಾಲದ ರಕ್ಷಾಕವಚವಾಗಿ ಪ್ರಾಮುಖ್ಯತೆಯನ್ನು ಪಡೆಯುವುದರಲ್ಲಿ ಯಾವುದೇ ಅನುಮಾನವಿಲ್ಲ.

ತಮಟಕಲ್ಲು ಪರಸರದಲ್ಲಿ ಕಂಡುಬಂದ ಶಾಸನಗಳು ನೈಜ ಘಟನೆಗಳಿಗೆ ಸಾಕ್ಷಿಯಾಗಿರುವುದರಿಂದ ತನ್ನ ಐತಿಹಾಸಿಕ ಮತ್ತು ಸಾಹಿತ್ಯಿಕ ಮಹತ್ವವನ್ನು ಹೆಚ್ಚಿಸಿಕೊಳ್ಳುವ ಯೋಗ್ಯವಾದ ಸ್ಥಳವೆಂದು ಹೇಳಬಹುದು.

## ಸ್ಮಾರಕ ಶಿಲ್ಪಗಳು

ಕರ್ನಾಟಕದ ಶಾಸನಗಳಲ್ಲಿ ದೊರೆಯುವಂತಹ ಮೂಲ ಸಾಮಾಗ್ರಿಗಳನ್ನು ವಿಭಿನ್ನವಾದ ದೃಷ್ಟಿಯಿಂದ ವಿಶ್ಲೇಷಿಸಿದ ಯಶಸ್ಸು ಎಂ.ಚಿದಾನಂದಮೂರ್ತಿಯವರಿಗೆ ಸಲ್ಲುತ್ತದೆ. ಇವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ಕೃತಿಯಲ್ಲಿ ಉಲ್ಲೇಖಿಸಿರುವ ಕೆಲವು ವಿಚಾರಗಳನ್ನು ಇಲ್ಲಿ ಹೇಳುವುದು ಔಚಿತ್ಯವೆಂದೆನಿಸುತ್ತದೆ. ರಾಜರು ಕಾಲದಿಂದ ಕಾಲಕ್ಕೆ ಆಡಳಿತ ನಡೆಸಿರುವುದಕ್ಕೆ ಇತಿಹಾಸವೆಂಬ ಭಾವನೆ ಬಹಳ ಪ್ರಚಲಿತವಾಗಿದೆ. ಜನತೆ ಬಾಳಿ ಬದುಕಿದ ರೀತಿ, ಅನುಸರಿಸಿದ ಧರ್ಮ, ಬೆಳಸಿದ ಕಲೆ, ಅವರ ಜೀವನ ಸಮಸ್ಯೆಗಳು ಅವರ ಜೀವನದ ಮೌಲ್ಯಗಳನ್ನು ಇತ್ಯಾದಿಗಳ ವಿವರಣೆಯೇ ಆ ದೇಶದ ಮತ್ತು ಜನತೆಯ ಇತಿಹಾಸ.[೧೮] ಈ ರೀತಿಯ ಇತಿಹಾಸವನ್ನು ಒದಗಿಸುವಲ್ಲಿ ವೀರಗಲ್ಲುಗಳು ಬಹಳ ಪ್ರಮುಖವಾದವು. ನಿಧನವಾದ ವ್ಯಕ್ತಿಯನ್ನು ಅಥವಾ ಸಂಸ್ಕಾರ ಮಾಡಿದ ನಿರ್ದಿಷ್ಟ ಸ್ಥಳದ ಗುರುತಿಗಾಗಿಯೋ, ಮಡಿದವರ ಸ್ಮರಣಾರ್ಥವಾಗಿಯೋ ಕೆಲವಾರು ಸಂಕೇತಗಳನ್ನೋ ಗುರುತುಗಳನ್ನೋ ಒಂದು ನಿಗಧಿಯಾದ ಸ್ಥಳದಲ್ಲಿ ಅಥವಾ ಸಮಾಧಿ ಮಾಡಿದ ಸ್ಥಳದಲ್ಲಿ ನೆಡುತ್ತಿದ್ದರು. ಇವು ಸಾಮಾನ್ಯವಾಗಿ ಆಯಾ ದೇಶಗಳಲ್ಲಿನ ಧರ್ಮ, ನಂಬಿಕೆ, ಸಾಮಾಜಿಕ, ಪ್ರತಿಷ್ಠೆಗಳನ್ನು ಅನುಸರಿಸಿಯೇ ಬೆಳೆದಿದೆ. ಪ್ರಪಂಚದಾದ್ಯಂತ ಇಂತಹ ಸ್ಥಳಗಳ ಮೇಲೆ ತಮ್ಮದೇ ಆದಂತಹ ಸ್ಮಾರಕಗಳನ್ನು ಕಟ್ಟಿರುವುದನ್ನು ಕಾಣಬಹುದು.[೧೯]

ವೀರರು ತಮ್ಮ ಸ್ವಾರ್ಥಕ್ಕಾಗಿ ಮಡಿಯದೆ ಸಮಾಜದ ಒಳಿತಿಗಾಗಿ ಪ್ರಾಣತ್ಯಾಗ ಮಾಡಿದ್ದರಿಂದ ಇವರ ಸ್ಮರಣಾರ್ಥವಾಗಿ ಮಾಡಿರುವ ಸ್ಮಾರಕ ಶಿಲ್ಪಗಳೇ ವೀರಗಲ್ಲುಗಳು.[೨೦]

ಅಂದರೆ ಇಚ್ಛಾಮರಣವನ್ನು ಆಹ್ವಾನಿಸಿದವರ ಗೌರವಾರ್ಥ ನೆಟ್ಟ ನಿಸಿಧಿಗಳ ಜೊತೆ ಜೊತೆಗೆ ರಣರಂಗದಲ್ಲಿ ಮಡಿದ ಯೋಧರ ವೀರಗಲ್ಲುಗಳೂ ಸೇರಿಕೊಳ್ಳತೊಡಗಿದವೆಂದರ್ಥ. ಯುದ್ಧವನ್ನು ತೀವ್ರವಾಗಿ ಪ್ರೀತಿಸಿ ಕೊನೆಯುಸಿರಿರುವವರೆಗೂ ಕಾದಾಡಿದ ಮಾನವಗಂಥ ಹಸ್ತಿಪಿಟ್ಟುಗನ, ವೈರಿ ಸೈನ್ಯಕ್ಕೆ ಕಠೋರನಾದ ಬೋಯಿಗನ ಭಾಗಿಯೂರಿನಲ್ಲಿ ವೀರಮರಣ ಹೊಂದಿದ ಸಾವಿಯಬ್ಬೆಯ ವೀರಗಲ್ಲುಗಳು ಇದಕ್ಕೆ ನಿದರ್ಶನಗಳು.[೨೧]
ಅವರು ಮಾಡಿದ ಹೋರಾಟ ಇಂದಿನ ತಮ್ಮ ದೃಷ್ಟಿಯಲ್ಲಿ ಏನಾದರೂ ಆಗಿರಲಿ ಸಮಾಜದ ಒಳಿತಿಗಾಗಿ ಜೀವನದ ಹಂಗನ್ನು ತೋರಿದ ಅವರ ಧೀಮಂತಿಕೆಯನ್ನು ನಿಷ್ಠೆ, ಸ್ವಾಮಿಭಕ್ತಿ, ಸ್ವಾಭಿಮಾನಗಳಿಂದ ಕೂಡಿದುದಾಗಿದೆ.

## ವೀರಗಲ್ಲುಗಳು

ವೀರನೊಬ್ಬನ ಸವಿನೆನಪಿಗಾಗಿ ಸ್ಮಾರಕವಾಗಿ ನಿರ್ಮಿಸಿದ ಶಿಲೆಗಳನ್ನೇ ವೀರಗಲ್ಲುಗಳು. ಇವು ವೀರತ್ವ ಸೂಚನ ಫಲಕಗಳನ್ನಾಗಿ ಬಳಸಿಕೊಳ್ಳಲಾಗಿದೆ. ವ್ಯಕ್ತಿಯೊಬ್ಬ ತನ್ನ ಜೀವವನ್ನು ಇತರರ "ಆಸ್ತಿ, ಸ್ತ್ರೀ, ದನಕರುಗಳ ರಕ್ಷಣೆಗಾಗಿ ಶತೃಗಳೊಡನೆ ಹೋರಾಡುತ್ತಿರುವುದನ್ನು ಇವು ಸೂಚಿಸುತ್ತವೆ.[೨೨]
ತಮಟಕಲ್ಲು ಪರಿಸರದಲ್ಲಿ ಕೆಲವು ವೀರಗಲ್ಲುಗಳು ಕಂಡುಬರುತ್ತವೆ.

ಸಂಖ್ಯೆ : ೦೧
ಶಿಲ್ಪ : ವೀರಗಲ್ಲು
ಸ್ಥಳ : ಗ್ರಾಮದ ಸಮೀಪ
ಕಾಲಮಾನ : ೫ನೇ ಶತಮಾನ

ಕರ್ನಾಟಕದಲ್ಲಿ ದೊರೆತಿರುವ ಅತ್ಯಂತ ಪ್ರಾಚೀನ ವೀರಗಲ್ಲು ಇದಾಗಿದೆ. ತಮಟಕಲ್ಲು ಗ್ರಾಮದ ಪೂರ್ವದಿಕ್ಕಿನಲ್ಲಿ ಇರುವ ತಳವಾರ ಓಬಜ್ಜ(ಹನುಮಂತಪ್ಪ) ಎಂಬುವವರ ಹೊಲದಲ್ಲಿ ಸರ್ವೆ ನಂಬರ್ ೩೭/೧ರಲ್ಲಿ ಈ ವೀರಗಲ್ಲನ್ನು ನೋಡಬಹುದಾಗಿದೆ. ಈ ವೀರಗಲ್ಲಿನಲ್ಲಿ ಮೂವರು ವೀರರನ್ನು ಒಂದೇ ಸಾಲಿನಲ್ಲಿ ಶಿಲೆಯ ಮೇಲೆ ಕಂಡರಿಸಲಾಗಿದೆ. ಅದರ ಮೇಲೆ ಮೂರು ಸಾಲುಗಳ ಸಂಸ್ಕೃತ ಶಾಸನವನ್ನು ಕೆತ್ತಲಾಗಿದೆ. ಈ ಮೂವರ ವೇಷಭೂಷಣ ಹೆಚ್ಚಾಗಿ ಒಂದೇ ರೀತಿ ಕಂಡುಬರುತ್ತದೆ.[೨೩] ಮೊದಲನೇ ವೀರನು ತಲೆಯಲ್ಲಿ ತುರುಬು, ಕಿವಿಯಲ್ಲಿ ಪತ್ರಕುಂಡಲ, ಹಣೆಯಲ್ಲಿ ಪಟ್ಟಿಕೆ, ಕೊರಳಲ್ಲಿ ಕಂಠಹಾರ, ಹಾರ, ತೋಳಲ್ಲಿ ಬಾಹುಹೊಳೆಯ, ಕೈಯಲ್ಲಿ ಕೈಗಡಗ, ಮತ್ತು ಕಾಲಲ್ಲಿ ಕಾಲ್ಗಡಗ ಎಡಗೈಯಲ್ಲಿ ವೀರನು ಬಾಣವನ್ನು ಮತ್ತು ಬಲಗೈಯಲ್ಲಿ ಬಿಲ್ಲನ್ನು ಹಿಡಿದಿರುವನು. ವೀರನು ಸೊಂಟದಿಂದ ಮೊಣಕಾಲೀನವರೆಗೆ ದೋತಿಯನ್ನು

ನೆರೆಗೆಯಾಕಾರದಲ್ಲಿ ಧರಿಸಿರುವನು. ಮಧ್ಯೆನಿಂತ ವೀರನ ತಲೆಯ ಮಧ್ಯಭಾಗದ ಅಲಂಕರಣ ಇನ್ನಿತರರ ಕೇಶ ಅಲಂಕಾರಕ್ಕಿಂತ ಭಿನ್ನವಾಗಿದೆ. ಈ ಗುಂಪಿನ ಮೊದಲ ಚಿತ್ರದಲ್ಲಿ ಮಾತ್ರ ವೀರನು ತನ್ನ ಬಲಗೈಯನ್ನು ಬಗ್ಗಿಸಿ ಎದೆಯ ಮೇಲಿಟ್ಟಿರುವನು. ಇದೇ ರೀತಿ ಮಧ್ಯೆದಲ್ಲಿರುವ ವೀರನ ಮುಂದಕ್ಕೆ ಚಾಚಿದ ಎಡಗಾಲು, ಆತನ ದೇಹಾಂಗ ಮತ್ತು ಮುಖ ಲಕ್ಷಣವು ಇನ್ನಿತರರಿಗಿಂತ ಭಿನ್ನವೆನಿಸಿವೆ. ವೀರನೊಬ್ಬನ ಪಾದಕ್ಕೆ ವೈರಿಗಳು ಬಿಟ್ಟ ಬಾಣ ನೆಟ್ಟಿದೆ. ಒಟ್ಟಾರೆ ಈ ಮೂವರ ದೇಹಾಂಗ ಮುಖ ಲಕ್ಷಣವು ಸ್ವಲ್ಪ ಭಿನ್ನವಾಗಿದೆ. ಅವನಿಗೆ ಒಂದು ಬಾಣವು ಎಡ ಪಾರ್ಶ್ವದಲ್ಲಿ ದೇಹಕ್ಕೆ ಚುಚ್ಚಿದೆ. ಮಧ್ಯೆದಲ್ಲಿರುವವರು ಅವನ ಸೈನಿಕರೆಂದು ಊಹಿಸಬಹುದು. ಈ ಶಿಲ್ಪವು ವೀರಗಲ್ಲುಗಳ ಪರಂಪರೆಯಲ್ಲಿ ಅತ್ಯಂತ ಪ್ರಾಚೀನವಾಗಿದೆ. ಸುಮಾರು ಕ್ರಿ.ಶ.೫ನೇ ಶತಮಾನದ ಅಂತ್ಯ ಹಾಗೂ ಈ ವೀರರನ್ನು ಒಂದೇ ಸಾಲಿನಲ್ಲಿ ಚಿತ್ರಿಸಿರುವುದು ಸ್ಮಾರಕಗಳ ಕಲಾ ಚರಿತ್ರೆಯಲ್ಲಿ ವಿರಳವೆನಿಸಿದೆ. ಅದರ ಮೇಲಿರುವ ಸಂಸ್ಕೃತ ಪಾಠದಲ್ಲಿ ಗುಣಮಧುರನ ವಂಶದ ವಿವರವಿದೆ.

೧. ಸ್ವಸ್ತಿ (೧*) ಶ್ರೀ ಮರ್ತ್ಮಂಸಿಕ್ಕ ಪುರಾಧಿ ಪತಿಃ ಅಥ ಭಾರದ್ವಾಜ ವಂಶದ
ನಾಗಮನ್ಯಪುತ್ತೋಮನಾದ

೨. ಗಮಃತಸ್ಯ ಪಸೂನುಃ ಗುಣ ಮಧುರೋ ನಾಮ ಸತ್ಕಾತ್ಯಾರ್ಗ ಪ್ರಶಸ್ಥಿಃ

ಈ ವೀರಗಲ್ಲಿನಲ್ಲಿ ಬದಿಗಿನ ಶಾಸನವು ಕನ್ನಡ ಭಾಷೆ ಮತ್ತು ವೃತ್ತ ಛಂದಸ್ಸಿನಲ್ಲಿದೆ. ಗುಣ ಮಧುರ ಭೋಗಿಯೂ ಹೌದು. ಯುದ್ಧ ಭೂಮಿಯಲ್ಲಿ ಯಮನಂತೆ ಇರುವ ಇವನ ಗುಣವನ್ನು ಶತೃಗಳು ಇವನನ್ನು ನಿಂದಿಸುತ್ತಿರಲಿಲ್ಲವೆಂದರೆ ಇವನ "ಶೌಚಗುಣ" ತೋರಿಸುತ್ತದೆ. ಅದರ ಒಂದು ಪದ್ಯ ಹೀಗಿದೆ.

"ಫಣಮಣಿ ಅನ್ತು ಭೋಗಿ ಇದನ್ನು ಫಣ ದುಳ್ಮಣಿಲ್ಮನ ದೋನ್ ರಣ ಮುಖದುಳ್ಳ ಕಾಲ ನರಿಯುಳ್ಕ್ಪ ಮನಿನ್ದ್ಯ ಗುಣನ್ ಪ್ರಣಯಿಜನಕ್ಕೆ ರಾಮನಸೀತೋತ್ಪಲವರ್ಣ್ಣನವನ್ ಗುಣಮಧು ರಾನ್ಕ ದಿವ್ಯ ಪುರುಷನ್ ಪುರುಷ ಪ್ರವರನ್."[೨೪]

ಸುಮಾರು ೫ನೇ ಶತಮಾನದಿಂದ ಹಿಡಿದು ವಿಜಯನಗರದ ಕಾಲದವರೆಗಿನ ವೀರಗಲ್ಲುಗಳ ಪಾಠವನ್ನು ಗಮನಿಸಿದರೆ, ಒಂದು ರೀತಿಯ ಕ್ರಮಬದ್ಧವಾದ ಬೆಳವಣಿಗೆಯನ್ನು ಗುರುತಿಸಬಹುದು. ಈ ಬೆಳವಣಿಗೆ ಆರಂಭಕಾಲದಲ್ಲಿ ಪ್ರಯೋಗ ಶೀಲತೆಯಿಂದ ವೈವಿಧ್ಯಪೂರ್ಣವಾಗಿ ಬೆಳೆದು ಹೊಯ್ಸಳರ ಕಾಲದಲ್ಲಿ ಪಡಿಯಚ್ಚಿನ ಮಾರ್ಗವನ್ನು ಹಿಡಿಯಿತು. ವಿಜಯನಗರ ಕಾಲದಿಂದ ಹಿಡಿದು ಶತಮಾನದಿಂದ ಶತಮಾನಕ್ಕೆ ಭಾಷೆ, ಶೈಲಿ ಮುಂತಾದ ದೃಷ್ಟಿಯಿಂದ ಅವನತಿಯನ್ನು ಹೊಂದುತ್ತಾ ಬಂದಿತು. ಈ ರೀತಿಯಾಗಿ ತಮಟಕಲ್ಲು ಗ್ರಾಮದಲ್ಲಿ ವೀರಗಲ್ಲುನ್ನು ಕಾಣಬಹುದು.

**ವೀರಮಾಸ್ತಿಗಲ್ಲು**

ವೀರಮಾಸ್ತಿಶಿಲ್ಪಗಳಲ್ಲಿ ವೀರನಿಗೆ ಹೆಚ್ಚು ಪ್ರಾಧಾನ್ಯವಿದ್ದು, ಮಹಾಸತಿ ಶಿಲ್ಪಕ್ಕೆ ಕಡಿಮೆ ಪ್ರಾಧಾನ್ಯತೆಯನ್ನು ಅಥವಾ ಇಬ್ಬರನ್ನು ಸರಿಸಮಾನವಾಗಿ ಚಿತ್ರಿಸಲಾಗಿರತ್ತದೆ. ಈ ರೀತಿಯ ಶಿಲ್ಪವನ್ನು ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ಕಾಣಬಹುದಾಗಿದೆ.

ತಮಟಕಲ್ಲು ಗ್ರಾಮದಿಂದ ಆಯಿತೋಳು ಗ್ರಾಮಕ್ಕೆ ಹೋಗುವ ಪಶ್ಚಿಮ ದಿಕ್ಕಿನ ರಸ್ತೆಯ ಪಕ್ಕದಲ್ಲಿ ವೀರಸತಿಗಲ್ಲು ಕಂಡುಬರುತ್ತದೆ. ಇದು ವಿಜಯನಗರ ಕಾಲದ್ದಾಗಿದೆ. ಇದರಲ್ಲಿ ವೀರನು ತ್ರಿಭಂಗಿಯಲ್ಲಿದ್ದು ಕಿವಿಯಲ್ಲಿ ಪತ್ರಕುಂಡಲ, ಕೊರಳಲ್ಲಿ ಕಂಠಹಾರ, ಹಾರ, ತೋಳಲ್ಲಿ ಬಾಹುಹೊಳೆಯ, ಕೈಯಲ್ಲಿ ಕೈಗಡಗ, ಕಾಲಲ್ಲಿ ಕಾಲ್ಗಡಗ, ಸೊಂಟದಲ್ಲಿ ಪಟ್ಟಿಕೆಯಿದ್ದು ಕತ್ತಿಯನ್ನು ಇರಿಸಿಕೊಂಡಿರುವನು. ವೀರನು ಸೊಂಟದಿಂದ ಮೊಣಕಾಲೀನವರೆಗೆ ದೋತಿಯನ್ನು ನೆರಿಗೆಯಾಕಾರದಲ್ಲಿ ಧರಿಸಿರುವನು.

ಸತಿಯು ತಲೆಯಲ್ಲಿ ತುರುಬು ಧರಿಸಿದ್ದು, ಹಣೆಯಲ್ಲಿ ಪಟ್ಟಿಕೆ ಇದ್ದು, ಕಿವಿಯಲ್ಲಿ ಪತ್ರಕುಂಡಲ, ಕೊರಳಲ್ಲಿ ಕಂಠಹಾರ, ಹಾರ, ತೋಳಲ್ಲಿ ಬಾಹುಹೊಳೆಯ, ಕೈಗಡಗ, ಕಾಲ್ಗಡಗ ಸತಿಯು ಬಲಗೈಯನ್ನು ಮೇಲೆತ್ತಿ ತೋರಿಸಿರುವಳು. ಸತಿಯ ಎಡಗೈ ಭಾಗವು ಭಗ್ನವಾಗಿರುವುದನ್ನು ಕಾಣಬಹುದಾಗಿದೆ. ಸತಿಯು ಸೊಂಟದಿಂದ ಪಾದದವರೆಗೆ ವಸ್ತ್ರವನ್ನು ನೆರಿಗೆಯಾಕಾರದಲ್ಲಿ ಧರಿಸಿರುವಳು.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಇದನ್ನು ವೀರಗಾರರ ಗುಡಿ ಎಂದು ಅದಕ್ಕೆ ಪೂಜೆಯನ್ನು ಮಾಡುವುದರ ಮೂಲಕ ಜೊತೆಗೆ ಸಂರಕ್ಷಣೆಯ ಹೊಣೆಯನ್ನು ಕಾಪಾಡಿಕೊಂಡು ಬಂದಿದ್ದಾರೆ. ಒಟ್ಟಾರೆಯಾಗಿ ಹೇಳುವುದಾದರೆ ವೀರಗಲ್ಲುಗಳನ್ನು ಸಾಮಾನ್ಯವಾಗಿ ವೀರನ ಸ್ವಗ್ರಾಮದಲ್ಲಿ ಹಾಕಿಸಲಾಗುತ್ತಿತ್ತು. ಹೀಗೆ ಹಾಕಿಸಿದ ವೀರಗಲ್ಲುಗಳೂ ದೇವಾಲಯದ ಮುಂಭಾಗದಲ್ಲಿ ಕಾಣಬಹುದು. ಇಂತಹ ವೀರಗಲ್ಲುಗಳು ನಿರ್ದಿಷ್ಟ ಪ್ರದೇಶದಲ್ಲಿರಬಹುದು ಅಥವಾ ಜನರಿಗೆ ಪದೇ ಪದೇ ಕಾಣುವಂತಹ ಪ್ರದೇಶದಲ್ಲಿ ಕಂಡುಬರುತ್ತವೆ. ಇಂತಹ ವೀರಗಲ್ಲು, ವೀರಸತಿಗಲ್ಲು ತಮಟಕಲ್ಲು ಗ್ರಾಮದಲ್ಲಿ ಕಂಡುಬರುತ್ತವೆ. ಅಲ್ಲದೇ ಈ ವೀರಗಲ್ಲುಗಳು ಅಂದಿನ ಮಾನವ ಜೀವನದ ಬಗ್ಗೆ ಅವನಿಗೆ ಇರುವ ಧೋರಣೆಯನ್ನು ಅಂದಿನ ಅವನ ನಾಗರೀಕತೆ ಜೀವನ ಹಾಗೂ ಅವನ ಸಂಸ್ಕೃತಿಯ ಹಿನ್ನಲೆಯನ್ನು ತಿಳಿಸಿಕೊಡುವಲ್ಲಿ ಪ್ರಮುಖವಾದ ಆಧಾರಗಳಾಗಿವೆ ಎಂದು ಈ ಅಧ್ಯಯನದ ಹಿನ್ನಲೆಯಲ್ಲಿ ಹೇಳಬಹುದು.

## ಇತರೆ ಅಂಶಗಳು

### ಕೆರೆ-ಕಟ್ಟೆ-ಬಾವಿಗಳು

ಸಾಮುದಾಯಿಕ ಅಲೆಮಾರಿ ಬದುಕಿನಿಂದ ನೆಲೆನಿಂತು ಕೃಷಿ ಸಂಸ್ಕೃತಿಗೆ ರೂಪಾಂತರಗೊಂಡ ಸಂಧರ್ಭದಲ್ಲಿ ಮಾನವನಿಗೆ ಬೇಕಾದದ್ದು ನೀರು. ತನ್ನ ವಾಸಸ್ಥಳವನ್ನು ವಿಸ್ತರಿಸಿದ ಮಾನವ ನೀರಿಗಾಗಿ ಆಶ್ರಯಿಸಿದ್ದು ಮೊದಲು ಗುಂಡಿ-ತಗ್ಗುಗಳನ್ನು ಇವುಗಳ ನೀರಿನ ಅಗತ್ಯ ವಿಸ್ತರಣೆಯಾದಂತೆ ಕೆರೆ-ಕಟ್ಟೆ ಬಾವಿಗಳಾದವು.

ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ಯಾವುದೇ ಕೆರೆ ಕಂಡುಬಂದಿಲ್ಲ ಆದರೆ ಕ್ಷೇತ್ರಕಾರ್ಯ ಕೈಗೊಂಡಾಗ ಮೂರು ಬಾವಿಗಳನ್ನು ಕಾಣುತ್ತೇವೆ. ಇನ್ನೆರಡು ಬಾವಿಗಳು ರಸ್ತೆಯ ಬದಿಯಲ್ಲಿ

ಕಾಣಬಹುದು ಈ ಬಾವಿಗಳು ಮುಚ್ಚಿ ಹೋಗಿವೆ. ಪ್ರಸ್ತುತವಾಗಿ ದೇವರಬಾವಿ ಅಥವಾ ತುಂಬ ಬಾವಿಯನ್ನು ನನ್ನ ಕ್ಷೇತ್ರಕಾರ್ಯದಲ್ಲಿ ಪತ್ತೆಹಚ್ಚಲಾಗಿದೆ. ಇದು ಚಾರಿತ್ರಿಕ ಮಹತ್ವವನ್ನು ಪಡೆದ ಬಾವಿಯಾಗಿದೆ ಇದರ ಕಾಲಮಾನದಲ್ಲಿ ಸ್ಥಳೀಯರಿಗೆ ಗೊಂದಲಗಳಿವೆ ಆದರೆ ಇದು ಪಾಳೇಗಾರರ ಕಾಲದ್ದು ಇರಬಹುದು ಎಂದು ಹೇಳಬಹುದು. ಏಕೆಂದರೆ ಇದರ ಪರಿಸರಕ್ಕೆ ಹತ್ತಿರವಾಗಿರುವ ಮಲ್ಲಾಪುರ ಗ್ರಾಮದಲ್ಲಿ ಪಾಳೆಗಾರರ ಕಾಲದ ಕೆರೆಯನ್ನು ನಿರ್ಮಿಸಿದ್ದು ಕಾಣಬಹುದಾಗಿದೆ ಆ ಹಿನ್ನಲೆಯಲ್ಲಿ ಇದನ್ನು ಹೋಲಿಕೆ ಮಾಡಬಹುದಾಗಿದೆ. ಈ ಬಾವಿಯು ಆಂಜನೇಯ ದೇವಾಲಯದ ಹಿಂಭಾಗದಲ್ಲಿ ಅರ್ಧ ಕಿಲೋ ಮೀಟರ್ ಅಂತರದಲ್ಲಿ ಕಂಡುಬರುತ್ತದೆ. ಇದು ೨೭ ಅಡಿಯಷ್ಟು ಉದ್ದ ಮತ್ತು ೨೫ ಅಡಿಯಷ್ಟು ಅಗಲವನ್ನು ಹೊಂದಿದ್ದು ಗ್ರಾಮದ ಎಲ್ಲಾ ದೇವರುಗಳು ಹಬ್ಬ ಹರಿದಿನಗಳಲ್ಲಿ ಇಲ್ಲಿಗೆ ಬಂದು ಗಂಗಾ ಪೂಜೆಯನ್ನು ಮಾಡುವುದು ಪ್ರಸಿದ್ಧಿಯಾಗಿದೆ. ಹಾಗೂ ಈ ಬಾವಿಯನ್ನು ದೇವರಬಾವಿ ಎಂದು ಸಹ ಕರೆಯುತ್ತಾರೆ. ಹಾಗೆಯೇ ಇದರಿಂದ ತಮಟಕಲ್ಲು ಪರಿಸರವು ಚಾರಿತ್ರಿಕ ಮತ್ತು ಭೌಗೋಳಿಕವಾಗಿ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುವಲ್ಲಿ ಯಾವುದೇ ಸಂದೇಹವಿಲ್ಲ.

**ಕೊನೆ ಟಿಪ್ಪಣಿಗಳು**

೧. ಅನಂತರಂಗಾಚಾರ್ ಎನ್, ಭಾರತೀಯ ಶಿಲ್ಪ ಶಾಸ್ತ್ರದ ಸಂಕ್ಷಿಪ್ತ ಪರಿಚಯ, ೧೯೮೪, ಪು.೩೦೮

೨. ದೇವರಕೊಂಡಾರೆಡ್ಡಿ (ಕನ್ನಡ ಅನುವಾದ) ಭಾರತೀಯ ವಾಸ್ತುವಿದ್ಯೆ, ಪು.೧

೩. ಅದೇ, ಪು.೩.೫

೪. ಅದೇ, ಪು.೬

೫. ಅದೇ, ಪು.೭

೬. ಸೋಮಶೇಖರ್ ಎಸ್.ವೈ ಕರ್ನಾಟಕ ದೇವಾಲಯ ಕೋಶಃ ಚಿತ್ರದುರ್ಗ ಜಿಲ್ಲೆ, ೨೦೧೭, ಪು.೧೧೨

೭. ಸೋಮಶೇಖರ್ ಎಸ್ ವೈ. (ಸಂ) ಪೂರ್ವೋಕ್ತ, ಪು.೯೧

೮. ಅದೇ, ಪು.ಸಂ.೫

೯. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.೬೨೭

೧೦. ಗಿರಿಜಾ ಟಿ, ಪೂರ್ವೋಕ್ತ, ಪು. ೬

೧೧ .ಶೇಷಶಾಸ್ತ್ರಿ ಆರ್, ಶಾಸನ ಪರಿಚಯ, ೨೦೦೫,ಪು.೧

೧೨. ಸಿ.ಪಿ.ಕೆ. ಶಾಸನಶಾಸ್ತ್ರ ಪ್ರವೇಶ, ೨೦೧, ಪು. ೨೫

೧೩. ಚಿದಾನಂದಮೂರ್ತಿ ಎಂ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೯೬, ಪು.೧೩

೧೪. ಸಿ.ಪಿ.ಕೆ. ಪೂರ್ವೋಕ್ತ, ೨೦೦೧, ಪು,೫

೧.೫. ಶೇಷಶಾಸ್ತ್ರಿ ಪೂರ್ವೋಕ್ತ, ಪು,೫

೧೬. ಮಂಜುನಾಥ ಬೇವಿನಕಟ್ಟಿ, ಜಾನಪದ ಕರ್ನಾಟಕ, ೨೦೧೬, ಪು.೧೧೦

೧೭. ದೇವರಕೊಂಡಾರೆಡ್ಡಿ, ಇತಿಹಾಸ ದರ್ಶನ ಸಂಪುಟ ೩೩, ೨೦೧೮, ಪು.೩೦

೧೮. ಚಿದಾನಂದಮೂರ್ತಿ ಎಂ, ಪೂರ್ವೋಕ್ತ, ೧೯೬೯, ಪು. ೧೨

೧೯. ಶೇಷಶಾಸ್ತ್ರಿ ಆರ್, ಕರ್ನಾಟಕದ ವೀರಗಲ್ಲುಗಳು, ೨೦೦೪, ಪು. ೧೪

೨೦. ಪರಮಶಿವಮೂರ್ತಿ ಡಿ.ವಿ., ಕನ್ನಡ ಶಾಸನ ಶಿಲ್ಪ, ೧೯೯೯, ಪು. ೧೨

೨೧. ಷ. ಶೆಟ್ಟರ್ ಸಾವನ್ನು ಸ್ವಾಗತಿಸಿ-೧, ೨೦೦೫, ಪು. ೧೪

೨೨. ಸೋಮಶೇಖರ್ ಎಸ್.ವೈ., (ಸ) ಪೂರ್ವೋಕ್ತ, ಪು. ೯೬

೨೩. ಗೋಪಾಲ್ ಆರ್, ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ೨೦೦೫, ಪು. ೨೩೨

೨೪. ಅದೇ ಪು.೨೩೦

* * *

# ಅಧ್ಯಾಯ : ನಾಲ್ಕು

## ನಂಬಿಕೆ ಮತ್ತು ಆಚರಣೆಗಳು

೪.೧ ಐತಿಹ್ಯಗಳು ಮತ್ತು ನಂಬಿಕೆಗಳು

೪.೨ ಜಾತ್ರೆ ಹಬ್ಬ ಹರಿದಿನಗಳು

# ಅಧ್ಯಾಯ – ನಾಲ್ಕು
# ನಂಬಿಕೆ ಮತ್ತು ಆಚರಣೆಗಳು

## ೪.೧ ಐತಿಹ್ಯಗಳು ಮತ್ತು ನಂಬಿಕೆಗಳು

ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳು ಬಹುಶ್ರುತ ನೆಲೆಯಲ್ಲಿ ರೂಪಗೊಂಡಾಗ ಅವುಗಳ ವಿಸ್ತಾರ ಮತ್ತು ಮಹತ್ವ ಇಮ್ಮಡಿಗೊಳ್ಳುತ್ತವೆ. ಈ ಹಿನ್ನಲೆಯಲ್ಲಿ ಪ್ರಸ್ತುತ ಅಧ್ಯಾಯವನ್ನು ರೂಪಿಸಲಾಗಿದೆ. ನಿರ್ದಿಷ್ಟಪಡಿಸಿದ ಭೌಗೋಳಿಕ ಕ್ಷೇತ್ರದಲ್ಲಿ ಇತಿಹಾಸ ಮತ್ತು ಪುರಾತತ್ವ ಅಧ್ಯಯನದ ವಿವರಗಳು ವಿಜೃಂಭಿಸಿದರೂ ಅದರಾಚೆಗೂ ಇರುವ ಹಲವಾರು ವಿಷಯಗಳು ಹಾಗೆಯೇ ಉಳಿದುಕೊಂಡು ಬಿಟ್ಟಿವೆ. ಆ ಬಗೆಯಲ್ಲಿ ಸೃಷ್ಟಿಗೊಳ್ಳುವ ಕೊರತೆಗಳನ್ನು ತಕ್ಕಮಟ್ಟಿಗಾದರೂ ನಿವಾರಿಸಿಕೊಳ್ಳುವ ಯತ್ನ ಈ ಅಧ್ಯಯನಕ್ಕಿದೆ. ಆದರೆ ಇಂಥ ಸಂದರ್ಭದಲ್ಲಿ ಸಾಕ್ಷಿಗಳನ್ನು ಪ್ರಧಾನವಾಗಿ ಬೇಡುವ ಅಧ್ಯಯನಗಳಿಂದ ಸ್ವಲ್ಪಮಟ್ಟಿಗೆ ಬಿಡಿಸಿಕೊಳ್ಳುವ ಅನಿವಾರ್ಯ ಪ್ರಸಂಗವು ಉಂಟಾಗುತ್ತದೆ. ಇಂಥ ಸಂದರ್ಭದಲ್ಲಿ ಸಾಕ್ಷಿಗಳನ್ನು ಪ್ರಧಾನವಾಗಿ ಬೇಡುವ ಅಧ್ಯಯನಗಳಿಂದ ಸ್ವಲ್ಪಮಟ್ಟಿಗೆ ಬಿಡಿಸಿಕೊಳ್ಳುವ ಅನಿವಾರ್ಯ ಪ್ರಸಂಗವು ಉಂಟಾಗುತ್ತದೆ. ಇಂಥ ಕ್ರಮಗಳು ಇತಿಹಾಸ ಪುರಾತತ್ವ ಅಧ್ಯಯನಗಳಿಗೆ ವ್ಯತಿರಿಕ್ತವಾಗಿ ಕಂಡುಬಂದರೂ, ಅಂಥ ಕಥನಗಳಲ್ಲಿ ಆದಿ ಮತ್ತು ಅಂತ್ಯವಿಲ್ಲದ ಸಂಗತಿಗಳು ಅಮೂರ್ತರೂಪದಲ್ಲಿ ನೆಲೆಗೊಂಡಿರುವುದನ್ನು ಈ ಹೊತ್ತಿನ ಇತಿಹಾಸ ಪುರಾತತ್ವ ಅಧ್ಯಯನ ಕ್ರಮಗಳು ಸಾರಾಸಗಟಾಗಿ ತಿರಸ್ಕರಿಸುವುದಕ್ಕೆ ಸಾಧ್ಯವಿಲ್ಲ. ಸಾಂಸ್ಕೃತಿಕ, ಧಾರ್ಮಿಕ ಆಚರಣೆಯ ನೆಲೆಗಳ ವಿವರಗಳು ಹೆಚ್ಚಾಗಿ ಮೌಖಿಕ ಪರಂಪರೆಗಳಲ್ಲಿಯೇ ನೆಲೆಗೊಂಡಿರುತ್ತದೆ. ಅವುಗಳಲ್ಲಿ ಚಾರಿತ್ರಿಕ ತಥ್ಯ ಇದ್ದರೂ ಅದು ಕಾಲಾನುಕ್ರಮದ ಬದ್ಧತೆಯಲ್ಲಿ ರೂಪಗೊಂಡಿರುವುದಿಲ್ಲ. ಹಾಗಾಗಿ ಭೂತದಿಂದ ಭವಿಷ್ಯಕ್ಕೂ, ವರ್ತಮಾನದಿಂದ ಭೂತಕ್ಕೂ ಪಯಣಿಸಿದ ಹೆಜ್ಜೆ ಗುರುತುಗಳನ್ನು ನಿರ್ಧಿಷ್ಟವಾಗಿ ಗುರುತಿಸುವುದು ಸಹ ತುಂಬಾ ಕಷ್ಟ.[೧]

ಪ್ರಸ್ತುತ ಈ ಅಧ್ಯಯನವು ತಮಟಕಲ್ಲು ಪರಿಸರದ ಪರಧಿಯಲ್ಲಿರುವಂತಹ ಧಾರ್ಮಿಕ ಮತ್ತು ಸಾಂಸ್ಕೃತಿಕ ಆಚರಣೆ ನೆಲೆಯಲ್ಲಿ ರೂಪಗೊಂಡಿರುವ ಕೆಲವು ಮಹತ್ವದ ನೆಲೆಗಳ ಕುರಿತು ಚರ್ಚಿಸುವ ಉದ್ದೇಶ ಹೊಂದಲಾಗಿದೆ. ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ಮಿತಿಗಳ ಹಿನ್ನಲೆಯಲ್ಲಿ ಇತಿಹಾಸ ಪುರಾತತ್ವ ಸಂಗತಿಗಳಿಗೆ ಹೆಚ್ಚಿನಾಂಶ ಸಂಬಂಧಪಡಬಹುದಾದ ನೆಲೆಗಳ ಕುರಿತು ಮಾತ್ರ ವಿವೇಚಿಸಲಾಗಿದೆ. ಬಹು ವಿಸ್ತಾರವನ್ನು ಪಡೆದಿರುವ ಜಾತ್ರೆ-ಉತ್ಸವ-ಆಚರಣೆ ನಂಬಿಕೆಗಳ ಬಗೆಗೆ ಸಾಹಿತ್ಯ ಮತ್ತು ಜಾನಪದ ಅಧ್ಯಯನಗಳು ನಿಷ್ಕರ್ಷಿಸಬಹುದಾದ ನೆಲೆಯಲ್ಲಿ ವಿವರಿಸುವ ಉದ್ದೇಶವನ್ನು ಸಹ ಈ ಅಧ್ಯಯನ ಹೊಂದಿದೆ. ಇಲ್ಲಿ ಪ್ರಕಟಿಸಿರುವ ನೆಲೆಗಳ ಕುರಿತು ಜಾನಪದ ಅಧ್ಯಯನದ ಶಿಸ್ತುಗಳ ಹಿನ್ನಲೆಯಲ್ಲಿ ಚರ್ಚೆಗೆ ಒಳಪಡಿಸಬಹುದಾದ ಸನ್ನಿವೇಶಗಳಿದ್ದರೂ ಆ ತರಹದ ಪ್ರಯತ್ನವು ಸಹ ಈ ಆಧ್ಯಾಯನದ ಉದ್ದೇಶವಾಗಿದೆ.



### ಸ್ಥಳನಾಮಕ್ಕೆ ಸಂಬಂದಿಸಿದಂತೆ ಐತಿಹ್ಯಗಳು

ತಮಟಕಲ್ಲು ಸ್ಥಳನಾಮಕ್ಕೆ ಸಂಬಂಧಿಸಿದಂತೆ ಸ್ಥಳೀಯರು ಒದಗಿಸುವ ವಿವರಣೆ ಕುತೂಹಲಕಾರಿಯಾದುದಷ್ಟೆ ಅಲ್ಲ, ಜನಪದರ ಮನೋಧರ್ಮಕ್ಕೆ ತಕ್ಕ ಉದಾಹರಣೆಯೆನಿಸುತ್ತದೆ. ಈ ವಿವರಣೆ ಈ ಗುಡ್ಡದ ತುದಿಯಲ್ಲಿ ಬೋರಲುಹಾಕಿದಂತಿರುವ ಬಟ್ಟಲಾಕಾರದ ನೈಸರ್ಗಿಕ ಬಂಡೆಯನ್ನು ಕುರಿತದ್ದು. ಬೋರಲಾಕಾರದ ವಿಶಾಲಬಂಡೆಯ ಒಳಚಾಚು ಟೊಳ್ಳಾಗಿದ್ದು, ಅಲ್ಲಿ ಬೇರೆ ಬೇರೆ ಹಂತಗಳಲ್ಲಿ ಮೂಡಿಸಲಾಗಿರುವ ಕೆಲವು ಅಸ್ಪಷ್ಟ ಬಿಳಿವರ್ಣಚಿತ್ರಗಳಿರುವುದು ವಿಶೇಷ. ಈ ಬಂಡೆಯ ಬುಡದಲ್ಲಿ ಪುಟ್ಟ ಕಲ್ಲಿನ ವಿಗ್ರಹವನ್ನು ಸ್ಥಾಪಿಸಲಾಗಿದ್ದು, ಈ ನೆಲೆ ಪೂಜಾ ಎಡೆಯುಂತೆ ಪರಿವರ್ತಿತವಾಗಿದೆ. ಈ ಜಾಗವನ್ನು ತಲುಪಲು ತುಂಬಾ ಅಪಾಯಕಾರಿಯಾದ ಕಡಿದಾದ ಬಂಡೆಯನ್ನು ಆಶ್ರಯಿಸಿ ಏರಬೇಕು.[೨] ಏನೇ ಇದ್ದರೂ ಸ್ಥಳೀಯರು ಈ ಬಟ್ಟಲಾಕಾರದ ಬಂಡೆಯನ್ನು 'ತಮಟೆಕಲ್ಲು' (ನಗಾರಿಕಲ್ಲು) ಎಂತಲೇ ಗುರುತಿಸಿದ್ದು, ಅದರ ದೆಸೆಯಿಂದಲೇ ತಮಟಕಲ್ಲು ಎಂಬ ಹೆಸರು ನಿಷ್ಪನ್ನಗೊಂಡುದಾಗಿ ವ್ಯಾಖ್ಯಾನಿಸುತ್ತಾರೆ.[೩] ತಮಟಕಲ್ಲು ಗ್ರಾಮದಲ್ಲಿರುವ ಎಡೆಕಲ್ಲು ಬೆಟ್ಟದ ಮೇಲಿರುವ ಹಾವಿನ ಆಕಾರದ ಕಲ್ಲಿನ ಮೇಲೆ ಮಾನವ ಆಕೃತಿಯ ಹೆಜ್ಜೆಗಳನ್ನು ನೋಡಬಹುದು ಅವುಗಳನ್ನು ಸ್ಥಳೀಯರು ಆಂಜನೇಯ ಮತ್ತು ರಂಗಸ್ವಾಮಿ ಪಾದಗಳೆಂದು ನಂಬಿದ್ದಾರೆ



### ೪.೨ ಜಾತ್ರೆ-ಉತ್ಸವಗಳು

ಕೃಷಿ ಪ್ರಧಾನವಾದ ಬಹುಮುಖ ಸಂಸ್ಕೃತಿಯನ್ನು ಹೊಂದಿದ ಭಾರತ ದೇಶದಲ್ಲಿ ಜನರು ತಮ್ಮ ಬಿಡುವಿನ ಸಂದರ್ಭದಲ್ಲಿ ಗುಂಪುಗಳಾಗಿ ಸೇರಿ ತಮ್ಮ ಕಷ್ಟ-ಸುಖಗಳನ್ನು ಹಂಚಿಕೊಳ್ಳುವುದು ಇನ್ನೂ ಹಲವಾರು ಕೆಲಸ ಕಾರ್ಯಗಳ ಬದಲಾವಣೆ ಮಾಡಿಕೊಳ್ಳುವುದು ಕಾಣುತ್ತೇವೆ.[೪] ಈ ಎಲ್ಲಾ ಕೆಲಸಗಳಿಗೆ ಜನಪದರು ಒಂದು ನಿರ್ದಿಷ್ಟವಾದ ಸ್ಥಳ ರೂಪಿಸಿಕೊಂಡು

ಅವುಗಳನ್ನು ದೇವರ ಸ್ಥಳ/ಧಾರ್ಮಿಕ ಕ್ಷೇತ್ರಗಳೆಂದು ಕರೆದರು ಭಾರತ ದೇಶವು ವಿಶಾಲವಾದುದರಿಂದ ಹಲವಾರು ಬುಡಕಟ್ಟುಗಳು ಹೊಂದಿರುವುದರ ಪ್ರಯುಕ್ತ ಪ್ರತಿಯೊಂದು ಗ್ರಾಮದಲ್ಲಿ ಒಂದಿಲ್ಲದೊಂದು ದೇವರಗುಡಿ ಗುಡಾರ ಊರ ಹೊರಗೆ ಆಗಲಿ ಊರ ಮಧ್ಯದಲ್ಲಿಯಾಗಲಿ ಇರುವುದು ಕಂಡುಬರುತ್ತದೆ. ಈ ದೇವರುಗಳ ಆರಾಧನೆ, ಆಚರಣೆ, ಜಾತ್ರ-ಉತ್ಸವಗಳು ಒಂದು ನಿರ್ದಿಷ್ಟ ಕಾಲದಲ್ಲಿ ನಿಯಮಿತವಾಗಿ ಊರ ಜನರು ನೆರೆಹೊರೆಯವರು ರಕ್ತ ಸಂಬಂಧಿಗಳು ಸೇರಿ ನೆರವೇರಿಸುವ ಆಚರಣೆಗೆ ಜಾತ್ರೆ ಎಂದು ಕರೆಯುವರು.[೫]

**ಉಡುಸಲಮ್ಮದೇವಿ ಜಾತ್ರೆ**

ಚಿತ್ರದುರ್ಗ ತಾಲೂಕು ತಮಟಕಲ್ಲು ಗ್ರಾಮದಲ್ಲಿ ಉಡುಸಲಮ್ಮ ದೇವಿಯ ದೇವಸ್ಥಾನವಿದ್ದು ದಿನನಿತ್ಯ ಪೂಜಾ ಕಾರ್ಯಗಳು ನಡೆಯುತ್ತಿದ್ದು ಈ ದೇವಿಯ ಜಾತ್ರೆಯನ್ನು ಮೂರು ವರ್ಷಕ್ಕೆ ಒಂದು ಸಾರಿ ಸುಮಾರು ೬೦೦ ವರ್ಷಗಳ ಹಿಂದಿನಿಂದ ಜಾತ್ರೆ ಮಹೋತ್ಸವವನ್ನು ಗ್ರಾಮದಲ್ಲಿ ನೆಡೆಸಿಕೊಂಡು ಬಂದಿರುತ್ತಾರೆ. ಮೂರು ವರ್ಷಕ್ಕೆ ಒಂದು ಸಾರಿ ಹಂಪಿ ಹುಣ್ಣಿಮೆ ಆಗಿ ೯ ದಿನಕ್ಕೆ ಈ ಜಾತ್ರೆಯನ್ನು ಮಾಡುತ್ತಾರೆ.

**ಸಾರುವಿಕೆ**

ಸಾರುವಿಕೆ ಎಂದರೆ ಅಂಕಿತ ಹಾಡುವುದು ಅಥವಾ ಗ್ರಾಮೀಣ ದೇವತೆಯ ಜಾತ್ರೆ ನೆಡೆಯುವುದನ್ನ ಗೊತ್ತುಪಡಿಸುವುದು ಎಂದು ಜಾತ್ರೆ ಪ್ರಾರಂಭದ ಮುನ್ನ ಎಚ್ಚರಿಕೆಯಾಗಿ ಕಂಡುಬರುವ ಶಾಸ್ತ್ರ.

**ಜಾತ್ರೆಯ ಪ್ರಾರಂಭ**

ಹೆಣ್ಣು ದೇವತೆಗಳ ಪೂಜೆಯಾಗಲೀ ಅಥವಾ ಜಾತ್ರೆಯಾಗಲೀ ಮಂಗಳವಾರದಂದು ಪ್ರಾರಂಭ ಮಾಡುತ್ತಾರೆ. ಮೊದಲನೆ ದಿನ ಮಂಗಳವಾರ ರಾತ್ರಿ ಉಡುಸಲಮ್ಮನನ್ನು ಮದುವಣಗಿತ್ತಿಯನ್ನಾಗಿ ಮಾಡುತ್ತಾರೆ. ಉಡುಸಲಮ್ಮನನ್ನು ಹೂಗಳಿಂದ ಅಲಂಕರಿಸಿ ಆ ದಿನ ಊರಿನ ಜನರೆಲ್ಲರು ಮನೆಯಲ್ಲಿ ಮಡಿ ಮಾಡಿಕೊಂಡು ದೇವರಿಗೆ ನೇವೇದ್ಯ ಕೊಡುತ್ತಾರೆ. ಮರುದಿನ ಬೆಳಿಗ್ಗೆ ಅಂದರೆ ಬುಧವಾರದಂದು ಬೆಳಗ್ಗಿನ ಜಾವ ೫-೬ ಗಂಟೆಗೆ ಗಂಗಾ ಪೂಜೆಗೆ ಹೋಗಿ ಪೂಜೆಮಾಡಿಕೊಂಡು ಬಂದು ೬ ಹೆಜ್ಜೆ ಮುಂದೆ ಬಂದ ನಂತರ ಒಂದು ಕುರಿಮರಿಯನ್ನು ಕಡಿಯುತ್ತಾರೆ. ಅದನ್ನು ಹೊಳೆಮರಿ ಎನ್ನುತ್ತಾರೆ. ಕುರಿ ಮರಿಯ ಹೊಟ್ಟೆಭಾಗಕ್ಕೆ ಕಡಿಯುತ್ತಾರೆ. ಅಲ್ಲಿಂದ ಮುಂದೆ ಊರ ಹೊರಗೆ ಕುರಿ ಮರಿಯನ್ನು ಆಹುತಿ ಕೊಡುತ್ತಾರೆ. ನಂತರ

**ಚರಗ**

ಚರಗ ಅಥವಾ ಹುಲುಸು ಉಗ್ಗುವುದು ಒಂದು ಆಚರಣೆಯಾಗಿ ಮಾರಿ ಜಾತ್ರೆಗಳಲ್ಲಿ ರೂಢಿಗತವಾಗಿದೆ. ಈ ಚರಗದ ಒಂದು ಹನಿ ರಕ್ತವನ್ನು ಬೇರೆ ಊರಿನವರು ಮುಟ್ಟುವಂತಿಲ್ಲ ಕಟ್ಟು ನಿಟ್ಟಾಗಿ ಕಾವಲಿರುತ್ತಾರೆ. ಇನ್ನು ಕೆಲವು ಹಳ್ಳಿಗಳಲ್ಲಿ ಜಾಲಿ ಮುಳ್ಳು, ಬಳ್ಳಾರಿ ಜಾಲಿ, ನೆಗ್ಗಿ ಮುಳ್ಳುಗಳ ಬೇಲಿಯನ್ನು ಇಡೀ ಸುತ್ತಲೂ ಹಾಕತ್ತಾರೆ. ಇದನ್ನು ಪಾರಿಬೇಲಿ ಎನ್ನುವರು. ಊರ ಹೊರಗೆ ಚದರ ಚವಡಿ ಹತ್ತಿರ ಗೌರಸಂದ್ರನ ಮಾರಮ್ಮನ ದೇವಸ್ಥಾನದ ಹತ್ತಿರ ದೇವರನ್ನು ಕೂರಿಸಿ ಆ ದಿನವೇ ಪಟ್ಟದ ಕೋಣವನ್ನು ಬಲಿ ಕೊಡುತ್ತಾರೆ. ಗುರುವಾರದಂದು ದೇವಿಗೆ ಹರಕೆ ಹೊತ್ತಿರುವವರು ಚಿಕ್ಕಮಕ್ಕಳಿಗೆ ಬೇವಿನ ಸೀರೆ ಉಡಿಸುವುದು ಅಕ್ಕಿ ಮೀಸಲು ನೀಡುವುದು ಮಂಗಳಾರತಿ ಮಾಡಿಸುವುದು ಈ ದಿನವೇ ಬೇಟೆಯನ್ನು ಕಡಿಯುತ್ತಾರೆ. ಆದ್ದರಿಂದ ಇದಕ್ಕೆ ಬೇವು ಭೇಟಿ ಎಂದು ಕರೆಯುವರು.

**ಸಿಡಿಯಾಡುವುದು**

ಸಿಡಿ ಆಡುವುದಕ್ಕೂ ಮುಂಚೆ ಅಮ್ಮನ ಸಿಡಿ ಕಂಬಕ್ಕೆ ಪೂಜೆ ಮಾಡುತ್ತಾರೆ. ಅನಂತರ ಗೌಡರ ಮನೆಯಿಂದ ಪೂಜೆ ಸಾಮಾನು ಎಡೆಯನ್ನು ತಂದು ಕಂಬಕ್ಕೆ ಹಚ್ಚುತ್ತಾರೆ. ಬಡಿಗೇರು ಸಿಡಿ ಕಂಬಕ್ಕೆ ಮಂಟಪ ಕಟ್ಟುತ್ತಾರೆ. ಸಂಜೆ ೪–೫ ಗಂಟೆಗೆ ಇದೇ ಊರಿನ ಹರಿಜನರು ಸಿಡಿ ತಿರುಗಿಸುತ್ತಾರೆ. ಅವರಲ್ಲಿ ಉಪವಾಸವಿರುವ ಇಬ್ಬರು ವ್ಯಕ್ತಿಗಳು ಸಿಡಿ ಆಡಲು ಕೊಂಡಿ ಜೋಡಿಸಿ ಸಿಡಿ ಆಡುತ್ತಾರೆ. ಕೊನೆಯ ದಿನ ಗಾವು ಜಿಗಿಯುವುದರ ಮೂಲಕ ಜಾತ್ರೆಯು ಅಂತಿಮಗೊಳ್ಳುತ್ತದೆ. ಸಂಜೆ ದೇವಿಯು ಮೂಲ ಸ್ಥಾನಕ್ಕೆ ಬಂದು ಮಹಾಮಂಗಳಾರತಿ ಮೂಲಕ ಮುಕ್ತಾಯವಾಗುತ್ತದೆ. ರಾಜ್ಯದ ಮೂಲೆ ಮೂಲೆಗಳಿಂದ ಭಕ್ತರು ಬಂದು ತಾಯಿಯ ಆಶೀರ್ವಾದ ಪಡೆದುಕೊಳ್ಳುತ್ತಾರೆ. ಆಧುನಿಕ ಜಗತ್ತಿನಲ್ಲಿ ಜಾತ್ರೆಗಳ ಸ್ವರೂಪ ಹಲವು ಬದಲಾವಣೆ ಒಳಗಾಗಿರುವಂತೆ ಕಂಡು ಬಂದರೂ ಆಧುನಿಕತೆಯ ಪ್ರಭಾವದಲ್ಲಿ ತನ್ನ ಮೊದಲಿನ ತೀವ್ರತೆಯನ್ನು ಕಡಿಮೆ ಮಾಡಿಕೊಂಡು ಕೇವಲ ಸಂಕೇತ ಮಟ್ಟಕ್ಕಿಳಿದಿರುವುದು ಕಂಡುಬರುತ್ತದೆ.

**ಯುಗಾದಿ**

ಇಂದು ನಾಗರಿಕತೆಗೆ ತಮ್ಮನ್ನು ಒಡ್ಡಿಕೊಳ್ಳುತ್ತಿರುವ ನಮ್ಮ ಗ್ರಾಮಗಳು ತೀರ ಇಕ್ಕಟ್ಟಿನ ಸ್ಥಿತಿಯಲ್ಲಿ ಸಿಲುಕಿಕೊಂಡಿವೆ. ಮುಂಚಿನ ನಮ್ಮ ಗ್ರಾಮೀಣ ಸಂಸ್ಕೃತಿ ಬದಲಾಗಿ ಪಟ್ಟಣದ ಸಂಸ್ಕೃತಿ ತೊಡಗಿದೆ. ಹಳೆಯ ಪದ್ಧತಿ ಸಂಪೂರ್ಣವಾಗಿ ಗ್ರಾಮಗಳಿಂದ ಮರೆಯಾಗಿಲ್ಲ ಪಟ್ಟಣದ ಹೊಸ ಸಂಸ್ಕೃತಿಯನ್ನು ಇನ್ನು ಸಂಪೂರ್ಣವಾಗಿ ಆವರಿಸಿಕೊಂಡಿಲ್ಲ. ಹಾಗಾಗಿ ನಮ್ಮ ಹಳ್ಳಿಗಳ ಬದುಕಿನ ವಿವಿಧ ಮಜಲುಗಳಲ್ಲಿ ಉಂಟಾಗುವ ಬದಲಾವಣೆಯಿಂದಾಗಿ ನಮ್ಮ ಹಳೆ ರೀತಿ,

ನೀತಿ, ಸಂಪ್ರದಾಯ ಆಚರಣೆಗಳು ಹಂತ ಹಂತವಾಗಿ ದೂರ ಸರಿಯುತ್ತಿವೆ.
ಯುಗಾದಿ ಎಂದ ಕೂಡಲೇ ನಮಗೆ ನೆನಪಾಗುವುದು ಬೇವು-ಬೆಲ್ಲ ಬೇವಿನ ಚಿಗುರಿನ ಕಹಿ, ಮತ್ತು ಬೆಲ್ಲದ ಸಿಹಿ ನೋವು ನಲಿವಿನ ಸಂಕೇತಗಳು ಹಿಂದೆ ನಡೆದ ದುಃಖದ ಘಟನೆಗಳನ್ನು ಆವರಿಸಿಕೊಂಡು ಇಂದಿನ ಸುಖದ ಸವಿಯನ್ನು ಸವಿಯಲು ಪುಣ್ಯವಿರಬೇಕು. "ನಮ್ಮ ಪಾಲಿಗೆ ಸಿಹಿ ಬೇಕು ಕಹಿ ಬೇಡ ಎನ್ನುತ್ತೇವೆ ಆದರೆ ನಾಲಿಗೆಗೆ ಸಿಹಿಯಾದುದೇ ಹೊಟ್ಟೆ ಸೇರಿ ಜೀರ್ಣವಾಗುವ ಹೊತ್ತಿಗೆ ಶರೀರಕ್ಕೆ ಕಹಿಯಾದಿತು ಹಾಗೇಯೇ ನಾಲಿಗೆಯ ತುದಿಗೆ ಕಹಿಯಾದ ವಸ್ತು ಮುಂದೆ ಪರಿಣಾಮವಾಗಿ ಸಿಹಿಯ ಹಿತವನ್ನು ಉಂಟು ಮಾಡುವುದು" ಈ ದೃಷ್ಟಿಯನ್ನು ಇಟ್ಟುಕೊಂಡು ಸಿಹಿ-ಕಹಿಗಳೆರಡನ್ನು ಯುಕ್ತ ಪ್ರಮಾಣಗಳಲ್ಲಿ ಉಚಿತ ಕಾಲದಲ್ಲಿ ಸೃಷ್ಠಿಸುವುದು ಜಾಣತನ ಆದ್ದರಿಂದ ಬೇವು-ಬೆಲ್ಲ ಎರಡನ್ನು ಜೊತೆಗೆ ತಿನ್ನುತ್ತಾರೆ.

ಯುಗಾದಿ ಹಬ್ಬ ಇಲ್ಲಿನ ಜನರಿಗೆ ಬಲು ಪ್ರಿಯವಾದ ಹಬ್ಬವಾಗಿ ಈ ಹಬ್ಬವನ್ನು ಸಮಸ್ತ ಗ್ರಾಮದ ಜನರೆಲ್ಲ ವಿಜೃಂಭಣೆಯಿಂದ ನಾಲ್ಕು ದಿನಗಳ ಕಾಲ ಆಚರಿಸುತ್ತಾರೆ. ಈ ಹಬ್ಬದ ವೈಶಿಷ್ಟ್ಯವೆಂದರೆ ಯುಗಾದಿಯ ಮೊದಲನೇ ದಿನ ಈ ಊರಿನ ಪ್ರಮುಖ ದೇವರಾದ ಶ್ರೀ ಆಂಜನೇಯ ಸ್ವಾಮಿಯ ಜಾತ್ರಾ ಮಹೋತ್ಸವಕ್ಕೆ ಸಮಸ್ತ ಜನರೆಲ್ಲ ಸೇರಿ ರಥೋತ್ಸವ ಮಾಡುವರು.

## ಶ್ರೀ ಆಂಜನೇಯಸ್ವಾಮಿಯ ರಥೋತ್ಸವ

ತಮಟಕಲ್ಲು ಗ್ರಾಮದ ಪ್ರಮುಖ ಉತ್ಸವಗಳಲ್ಲಿ ಒಂದಾದ ಆಂಜನೇಯನ ರಥೋತ್ಸವು ಪ್ರಮುಖವಾಗಿದೆ. ಈ ರಥೋತ್ಸವವು ಪ್ರತಿ ವರ್ಷವು ನಾಲ್ಕು ದಿನಗಳ ಕಾಲ ವಿಜೃಂಭಣೆಯಿಂದ ನಡೆಯುತ್ತದೆ. ರಥೋತ್ಸವದ ಮೊದಲ ದಿನವಾದ ಮಂಗಳವಾರ ಗಂಗಾಪೂಜೆ, ದೇವರ ಮೂರ್ತಿಗೆ ಸರ್ವ ಅಲಂಕಾರಗಳೊಂದಿಗೆ ಅಲಂಕರಿಸಿ ಪೂಜಿಸಿ ಅಲ್ಲಿಂದ ಊರಿನ ಮಕ್ಕಳಿಂದ ನವಧಾನ್ಯಗಳ ಮೊಳಕೆಯ ಆರತಿಯನ್ನು ಬೆಳಗುವರು. ನಂತರ ರಾತ್ರಿ ೧೨ ಗಂಟೆಗೆ ಅಗ್ನಿಕುಂಡ ಎಂಬ ವಿಶೇಷವಾದ ಕೆಂಡದ ಗುಂಡಿಯನ್ನು ನಿರ್ಮಿಸುತ್ತಾರೆ. ಶ್ರೀ ರಂಗನಾಥಸ್ವಾಮಿ ಬೆಟ್ಟಕ್ಕೆ ಬಿಜಯಂಗೈದು, ಶ್ರೀ ರಂಗನಾಥಸ್ವಾಮಿಯು ಲಕ್ಕವ್ವ, ತೊಳಸವ್ವರೊಡನೆ ವಿವಾಹ ನಡೆಯುತ್ತದೆ. ನಂತರ ಅಗ್ನಿಕುಂಡದ ಹತ್ತಿರ ಬಂದು ಶ್ರೀ ರಂಗನಾಥಸ್ವಾಮಿ ಮತ್ತು ಆಂಜನೇಯಸ್ವಾಮಿ ಪಟ್ಟದ ಪೂಜಾರಿಗಳು ಮೂರು ಭಾರಿ ಈ ಕೆಂಡವನ್ನು ಹಾಯ್ದುಹೋಗುವುದು ವಿಶೇಷವಾಗಿದೆ. ಎರಡನೇ ದಿನ ಶ್ರೀ ಆಂಜನೇಯಸ್ವಾಮಿ ದೇವಸ್ಥಾನದಲ್ಲಿ ಅಭಿಷೇಕ ನಡೆಯವುದು. ಭಕ್ತರು ಉರುಳು ಸೇವೆಯನ್ನು ಮಾಡುತ್ತಾರೆ ಕಾರಣ ಭಕ್ತರು ಬೇಡಿಕೊಂಡಿದ್ದು ನೆರವೇರಿದರೆ ಹರಕೆಯನ್ನು ಈ ರೀತಿಯಾಗಿ ಸಲ್ಲಿಸುತ್ತಾರೆ. ನಂತರ ಸಾಯಂಕಾಲ ೭ ಗಂಟೆಗೆ ಚಂದ್ರ ದರ್ಶನವನ್ನು ಮಾಡಿ ಗುರು-ಹಿರಿಯರಿಗೆ ನಮಸ್ಕರಿಸಿ ಆರ್ಶೀವಾದ ಪಡೆಯುತ್ತಾರೆ.

ಮೂರನೆಯ ದಿನ ಈ ದಿನದ ವಿಶೇಷತೆ ಎಂದರೆ ಆಂಜನೇಯ ಸ್ವಾಮಿ ಮತ್ತು ರಂಗನಾಥ ಸ್ವಾಮಿಯ ತೇರು ನಡೆಯುತ್ತದೆ. ಈ ತೇರಿಗೆ ಚಿತ್ರದುರ್ಗದ ಅಕ್ಕ ಪಕ್ಕದ ಹಳ್ಳಿಯ ಜನರು, ಸಮಸ್ತ ಭಕ್ತಾದಿಗಳು ಬರುತ್ತಾರೆ. ಈ ತೇರಿಗೆ ಸುಮಾರು ೧೧.೦೦೦ ಜನ ಸೇರುತ್ತಾರೆ. ನಂತರ ತೇರು ನಿಲ್ಲಿಸಿದ ಜಾಗದಲ್ಲಿ 'ದೊಡ್ಡ ಎಡೆ' ಸಾಯಂಕಾಲ ಸಕಲ ಬಿರುದಾವಳಿ ಮಂಗಳವಾದ್ಯಗಳೊಂದಿಗೆ ಮೆರವಣಿಗೆ ನಡೆಯುತ್ತದೆ.

ಕೊನೆಯ ದಿನ ಶ್ರೀ ಸ್ವಾಮಿಯ ಹೋಕಳಿ, ದೂಳೆ ಎಡೆ ಮತ್ತು ಮಹಾಮಂಗಳಾರತಿಯೊಂದಿಗೆ ಮುಕ್ತಾಯ ರಾತ್ರಿ ಗುಡಿದುಂಬಿಸುವ ಕಾರ್ಯ ನಡೆಯುತ್ತದೆ.

## ಕಾರಹುಣ್ಣಿಮೆ

ಕಾರಹುಣ್ಣಿಮೆ ಜನಪದರಿಗೆ ವಿಶೇಷವಾದದು ಕಾರು ಎಂದರೆ ಮಳೆ. ಮಳೆಗಾಲದ ಆರಂಭದಲ್ಲಿಯೇ ಇದು ಬರುವುದರಿಂದ ಕಾರಹುಣ್ಣಿಮೆ ಎನ್ನುತ್ತಾರೆ. ಜನಪದರು ಹೇಳುವ ನಾಣ್ಣುಡಿಯಂತೆ ಕಾರಹುಣ್ಣಿಮೆ ನಡೆದುಕೊಂಡು ಬಂದಿತ್ತು.

ಈ ದಿನದಂದು ವರ್ಷವಿಡಿ ದುಡಿದ ದನಗಳಿಗೆ ವಿರಾಮದ ದಿನವಾಗಿದೆ. ಈ ದಿನದಂದು ರೈತರ ಎತ್ತುಗಳನ್ನು ಬೇಸಾಯಕ್ಕೆ ಹೂಡದೇ ಮನೆಯಲ್ಲಿ ಪೂಜೆ ಮಾಡಿ ದನಗಳಿಗೆ ಮಾಡಿದ ಅಡುಗೆಯನ್ನು ತಿನ್ನಿಸುತ್ತಾರೆ. ಈ ದಿನದಂದು ಎತ್ತುಗಳಿಗೆ ವಿಶ್ರಾಂತಿಯನ್ನು ನೀಡಲಾಗುತ್ತದೆ. ಶ್ರೇಷ್ಟ ಮಾಸದ ಹುಣ್ಣಿಮೆಯನ್ನು ಕಾರಹುಣ್ಣಿಮೆಯೆಂದು ಕರೆಯುತ್ತಾರೆ. ಕೃಷಿಕರು ಇದನ್ನು ಮಳೆಗಾಲದ ಆರಂಭವೆಂದು ಹೇಳುತ್ತಾರೆ. ಈ ದಿನ ಎತ್ತುಗಳನ್ನು ತೊಳೆದು ಬಣ್ಣ ಬಣ್ಣಗಳಿಂದ ಶೃಂಗರಿಸಿ ಕೊಂಬುಗಳಿಗೆ ಬಣ್ಣಗಳನ್ನು ಕೊರಳಿಗೆ ಘಂಟೆ, ಗೆಜ್ಜೆಗಳನ್ನು ಕಟ್ಟಿ ದನಗಳನ್ನು ಅಲಂಕರಿಸುತ್ತಾರೆ. ಈ ದಿನ ಎತ್ತುಗಳನ್ನು ವ್ಯವಸಾಯ ಮಾಡಲು ರೈತರು ಉಪಯೋಗಿಸಿಕೊಳ್ಳುವುದಿಲ್ಲ. ಈ ದಿನವಾದರೂ ವರ್ಷವಿಡಿ ದುಡಿದ ಎತ್ತುಗಳಿಗೆ ವಿಶ್ರಾಂತಿ ದೊರೆಯಲೆಂದು ಬೇಸಾಯ ಮಾಡಲು ಬಳಸುವುದಿಲ್ಲ. ಮತ್ತು ಈ ದಿನ ಎತ್ತಿನ ಕೊಟ್ಟಿಗೆ ಸಾರಿಸಿ ದನಗಳಿಗೆ ಮೇವು ಹಾಕುವ ಗೊದ್ದಲಿಗೆ ಪೂಜೆ ಮಾಡಿ, ಜೋಳಕಟ್ಟು ಜೋಳದ ಅನ್ನ ಮಾಡಿ ಎತ್ತುಗಳಿಗೆ ನೈವೇದ್ಯ ಮಾಡುವರು.

## ನಾಗರ ಪಂಚಮಿ

ಶ್ರಾವಣ ಮಾಸದಲ್ಲಿ ಆಚರಿಸಲ್ಪಡುವ ಈ ಹಬ್ಬವನ್ನು ಸಾಮಾನ್ಯವಾಗಿ ಎಲ್ಲರೂ ಆಚರಿಸುತ್ತಾರೆ. ನಾಗರ ಪಂಚಮಿ ಹೆಣ್ಣುಮಕ್ಕಳ ಹಬ್ಬವೆಂದೇ ಕರೆಯಲಾಗುತ್ತದೆ. ಹೆಣ್ಣುಮಕ್ಕಳಿಗೆ ಉತ್ಸಾಹದ ಹಬ್ಬ ಗಂಡನ ಮನೆಯಲ್ಲಿರುವ ಹೆಣ್ಣುಮಕ್ಕಳನ್ನು ತವರಿಗೆ ಕರೆದುಕೊಂಡು ಬರುವವರು

ತಮ್ಮಟಕಲ್ಲು ಪರಿಸರದಲ್ಲಿ ಮದುವೆಯಾದ ಹೆಣ್ಣುಮಕ್ಕಳು ಮೊದಲ ಬಾರಿಗೆ ಗಂಡನ ಮನೆಯಲ್ಲಿಯೇ ಹುತ್ತಕ್ಕೆ ಹಾಲನ್ನು ಎರೆಯುತ್ತಾರೆ. ಲಿಂಗಾಯಿತರು ಗಣೇಶನ ಹಬ್ಬದ ದಿನದಂದು ಹುತ್ತಕ್ಕೆ ಹಾಲನ್ನು ಎರೆದರೆ ಮಿಕ್ಕ ಸಮುದಾಯದವರು ನಾಗರ ಪಂಚಮಿಯೆಂದು ಹಾಲನ್ನು ಎರೆಯುವರು. ಆ ದಿನ ಮನೆಯಲ್ಲಿ ಹೆಣ್ಣುಮಕ್ಕಳು ಉಪವಾಸವಿದ್ದು ನಡೆ-ಮಡಿಯಿಂದ ಅಡುಗೆಯನ್ನು ಮಾಡುತ್ತಾರೆ. ಸಜ್ಜೆ ಅಥವಾ ಜೋಳದ ಕಡಬು ಸೊಪ್ಪಿನ ಸಾರನ್ನು ಮಾಡಿ, ಚಿಗಳಿ ಟೊಮಟೊವನ್ನು ಮಾಡಿ ಗೆಜ್ಜೆ ವಸ್ತ್ರವನ್ನು ತಯಾರಿಸಿ ದೇವಸ್ಥಾನದಲ್ಲಿರುವ ನಾಗರ ಕಟ್ಟೆಗೆ ಹಾಲು ಎರೆದು ನಂತರ ಹುತ್ತಕ್ಕೆ ಪೂಜೆಯನ್ನು ಮಾಡಿ ನಂತರ ಉಪವಾಸ ಬಿಟ್ಟು ಊಟ ಮಾಡುತ್ತಾರೆ. ನಾಗರ ಪಂಚಮಿಯನ್ನು ಏಕೆ ಮಾಡುತ್ತಾರೆ ಎನ್ನುವುದಕ್ಕೆ ದಂತ ಕಥೆಯನ್ನು ಹೇಳುತ್ತಾರೆ. ಒಬ್ಬ ರೈತ ತನ್ನ ಗದ್ದೆಯಲ್ಲಿ ಊಳುತ್ತಿರುವಾಗ ನಾಗರ ಹಾವಿನ ಮರಿಗಳು ನೇಗಿಲ ಮೊನೆಗೆ ಸಿಕ್ಕು ಸಾಯುತ್ತವೆ ಮರಿಗಳ ಸಾವಿನಿಂದ ತಾಯಿ ನಾಗಿಣಿ ಕೋಪ ತಾಪ ಹೆಚ್ಚಿ ರೈತರ ಮನೆಗೆ ತರಳಿ ಮನೆಯವರನ್ನೆಲ್ಲಾ ಕಚ್ಚಿ ಸಾಯಿಸುತ್ತದೆ. ಅಷ್ಟಕ್ಕೆ ಅದು ಬಿಡದೇ ಆ ರೈತನ ಮದುವೆಯಾದ ಮಗಳನ್ನು ಸಾಯಿಸಿ ಕುಲ ಕ್ಷಯಗೊಳಿಸಲು ಅವಳ ಮನೆಯ ನಮಿಸುತ್ತಿದ್ದಳು ಅದನ್ನು ಕಂಡು ನಾಗಿಣಿಯ ಕೋಪ ಕರಗಿತು ಮನಸ್ಸು ಹಿಗ್ಗಿತು ತನ್ನ ಮರಿಗಳನ್ನು ಕೊಂದುದಕ್ಕಾಗಿ ತವರಿನವರನ್ನೆಲ್ಲ ಕಚ್ಚಿ ಸಾಯಿಸಿ ನಿನ್ನನ್ನು ಮುಗಿಸಲು ಇಲ್ಲಿಗೆ ಬಂದಿದ್ದೆ ಆದರೆ ನೀನು ಮಾಡುತ್ತಿರುವ ಪೂಜೆ ನೋಡಿ ಸಂತೋಷಗೊಂಡಿದ್ದೇನೆ. ನಿನ್ನ ಇಷ್ಟಾರ್ಥ ಹಿಡೇರಿಸುವೆ ಬೇಕಾದುದನ್ನು ಕೇಳು ಎಂದಾಗ ಆಕೆ ತನ್ನ ತಂದೆ, ತಾಯಿಯನ್ನು, ತವರಿನವರವನ್ನು ಬದುಕಿಸುವಂತೆ ಬೇಡಿಕೊಂಡು ನಾಗಿಣಿಯ ಜೊತೆ ತವರಿಗೆ ಬಂದಳು. ನಾಗಿಣಿ ವಿಷ ಹೀರಿ ಎಲ್ಲರನ್ನು ಬದುಕಿಸಿತು. ಅಂದು ಶ್ರಾವಣ ಶುದ್ಧ ನಾಗರ ಪಂಚಮಿಯಾಗಿತ್ತು ಈ ರೀತಿಯಾಗಿ ನಾಗರ ಪಂಚಮಿಯೆಂದು ಕಡಲೆಹುಂಡೆ, ಶೇಂಗಾಹುಂಡೆಗಳನ್ನು ಮಾಡಿ ಹಂಚುತ್ತಾರೆ.

## ಗಣೇಶ ಹಬ್ಬ

ಭಾರತೀಯ ಸಾಂಸ್ಕೃತಿಕ ಪರಂಪರೆ ಮತ್ತು ಒಗ್ಗಟ್ಟನ್ನು ಪ್ರತಿಬಿಂಬಿಸುವ ಹಬ್ಬವಾಗಿ ಆಚರಿಸಲ್ಪಡುವ ಈ ಹಬ್ಬಕ್ಕೆ ಭಾರತದ ಉದ್ದಗಲಕ್ಕೂ ವಿಶೇಷವಾಗಿ ಆಚರಿಸಲ್ಪಡುವ ಹಬ್ಬದಲ್ಲಿ ಗಣೇಶನ ಆರಾಧನೆಯು ಒಂದು. ಜಾತಿ, ಮತ, ಪಂಥದ ವ್ಯತ್ಯಾಸವಿಲ್ಲ. ಈ ಹಬ್ಬವನ್ನು ಹಿಂದೂಗಳು ತುಂಬಾ ಭಕ್ತಿ ಶ್ರದ್ಧೆಯಿಂದ ಆಚರಿಸುತ್ತಾರೆ. ತಮ್ಮ ಸ್ಥಿತಿ-ಗತಿಗಳಿಗೆ ತಕ್ಕಂತೆ ಗಣೇಶನನ್ನು ಮೂರು ದಿನ, ಐದು ದಿನ, ಒಂಭತ್ತು ದಿನ, ಮತ್ತು ಒಂದು ತಿಂಗಳಿನವರೆಗೆ ಅಂದರೆ ಗಣೇಶನ ಪ್ರತಿಷ್ಠಾಪನೆಯ ದಿನದಿಂದ ಹಿಡಿದು ಮಹಾನವಮಿ ಅಮವಾಸ್ಯೆಯವರೆಗೆ ಇಟ್ಟು ಪೂಜಿಸಿ ನಂತರ ವಿಸರ್ಜನಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವರು. ಈ ಹಬ್ಬದ ವಿಶೇಷವಾದ ಸಿಹಿ ಅಡುಗೆ ಪದಾರ್ಥವೆಂದರೆ ಕಡಬು, ಗೋದಿಯ ಹುಗ್ಗಿ ಮತ್ತು ಗಣಪತಿಯ ಪೂಜೆಗಾಗಿ

ಮೋದಕವನ್ನು ಮಾಡುವ ಮೂಲಕ ಈ ಹಬ್ಬವನ್ನು ಮುಕ್ತಾಯಗೊಳಿಸುವರು. ಇದೇ ರೀತಿಯಲ್ಲಿ ತಮಟಕಲ್ಲು ಪರಿಸರದಲ್ಲಿ ಗಣೇಶ ಹಬ್ಬವು ನಡೆದುಕೊಂಡು ಬಂದಿದೆ.

**ದಸರಾ ಹಬ್ಬ**

ದಸರಾ ಹಬ್ಬವು ನಾಡ ಹಬ್ಬವಾಗಿದ್ದು ಈ ದಿನ ಮನೆಯಲ್ಲಿರುವ ವಾಹನಗಳಿಗೆ ಶಸ್ತ್ರಸ್ತ್ರಾಗಳಿಗೆ ನೀರಿನಿಂದ ಸ್ವಚ್ಚಗೊಳಿಸಿ ಪೂಜೆ ಮಾಡುವರು. ಈ ದಿನದಂದು ಕೆಲವರು ಕುರಿ ಬಲಿಯನ್ನು ಕೊಟ್ಟು ವಿಶೇಷ ನೈವೇದ್ಯ ಮಾಡುವರು ಪಾಂಡವರು ಅಜ್ಞಾತವಾಸದ ಕಾಲದಲ್ಲಿ ತಾವು ಬಚ್ಚಿಟ್ಟ ಆಯುಧಗಳ ಪೂಜೆಯನ್ನು ಈ ದಿನ ಮಾಡಿದರೆಂದು ಆಯುಧಗಳ ಪೂಜೆ ಮಾಡುತ್ತಾರೆ.

**ವಿಜಯದಶಮಿ**

ಆಯುಧ ಪೂಜೆ ಆದ ಮರುದಿನವೇ ವಿಜಯದಶಮಿ. ಎಲ್ಲಾ ಶುಭ ಕಾರ್ಯಗಳಿಗೆ ಇದು ಒಳ್ಳೆಯ ಮುಹೂರ್ತವೆಂದು ಪರಿಗಣಿಸಲಾಗಿದೆ. ಮಹಾಲಯ ಅಮಾವಸ್ಯೆ ದಿನದಿಂದ ಬನ್ನಿ ಪೂಜೆಯನ್ನು ಊರಿನ ಹೆಣ್ಣು ಮಕ್ಕಳು ಮದುವೆಯಾದವರ ಆಗದೇ ಇರುವವರು ಒಂಭತ್ತು ಅಥವಾ ಹನ್ನೊಂದು ದಿನಗಳ ಕಾಲ ಬೆಳಗಿನ ಜಾವ ಬನ್ನಿಮರಕ್ಕೆ ಹೋಗಿ ಪೂಜೆಯನ್ನು ಮಾಡಿ ಬರುತ್ತಾರೆ. ಈ ರೀತಿ ಮಾಡುವುದರಿಂದ ಒಳ್ಳೆಯದಾಗುವುದು ಎಂಬ ನಂಬಿಕೆ ಆ ಊರಿನ ಜನರಲ್ಲಿ ಇದೆ. ಒಂಭತ್ತು ದಿನಗಳ ಕಾಲ ನವರಾತ್ರಿ ಪೂಜೆಗೆ ಕುಳಿತಿರುವ ಹೆಣ್ಣು ದೇವತೆಗಳನ್ನು ವಿಜಯ ದಶಮಿಯೆಂದು ಶೃಂಗರಿಸಿಕೊಂಡು ಗಂಗಾ ಪೂಜೆಗೆ ಕರೆದುಕೊಂಡು ಹೋಗಿ ಪೂಜೆ ಮಾಡಿ ನಂತರ ಫಲಕ್ಕಿಯಲ್ಲಿ ಬನ್ನಿಮರದ ಬಳಿ ಕರೆದುಕೊಂಡು ಹೋಗಿ ದೇವಿಗೆ ಪೂಜೆಯನ್ನು ಮಾಡುತ್ತಾರೆ ನಂತರ ಬಿಲ್ಲು ಬಾಣದಿಂದ ಬನ್ನಿಮರಕ್ಕೆ ಹೊಡೆದು ಬನ್ನಿಯನ್ನು ತಂದು ಊರಿನ ಎಲ್ಲ ಜನರಿಗೂ ಬನ್ನಿ ಕೊಟ್ಟು ಬನ್ನಿ ಬಂಗಾರವಾಗಲೆಂದು ಹಂಚಿ ಕಾಲಿಗೆ ಬೀಳುತ್ತಾರೆ. ಬನ್ನಿ ಕೊಟ್ಟವರ ಮನೆ ಬಂಗಾರವಾಗಲೆಂದು ಆಶಿಸುತ್ತಾರೆ.

**ದೀಪಾವಳಿ**

ಎಲ್ಲಾ ಹಿಂದೂಗಳು, ಬಂಧು-ಬಳಗದವರೊಂದಿಗೆ ಉತ್ಸಾಹದಿಂದ ಆಚರಿಸುವ ದೊಡ್ಡ ಹಬ್ಬ ದೀಪಾವಳಿ. ಹಬ್ಬದ ದಿನದಲ್ಲಿ ಎಲ್ಲಿ ನೋಡಿದರು ದೀಪಗಳ ಸಾಲು ಕಂಡು ಬರುತ್ತದೆ. ಮತ್ತು ಎಲ್ಲೆಲ್ಲಿಯೂ ಕಾಂತಿಯಿಂದ ಕೂಡಿರುತ್ತದೆ. ಮನೆಮನೆಯಲ್ಲಿ ಬೆಳಕು ಚೆಲ್ಲುವ ಹಬ್ಬ ಇದಾಗಿದ್ದು ಎಲ್ಲರೂ ಸಡಗರ ಸಂಭ್ರಮದಿಂದ ಆಚರಿಸುತ್ತಾರೆ. ಹಸುವಿನ ಸಗಣಿಯ ಹುಂಡೆಗಳನ್ನು ಮಾಡಿ ಪಾಂಡವರೆಂದು ಪೂಜಿಸುವ ವಾಡಿಕೆಯಿದೆ. ಇದು ಹಿಂಗಾರು ಬೆಳೆಯ ಸಡಗರ ಹಬ್ಬವೆನಿಸಿದೆ. ಪಾಲ್ಗುಣ ಮಾಸದ ಹುಣ್ಣಿಮೆಯ ದಿನ ಹೋಳಿ ಅಥವಾ ಕಾಮನ ಹಬ್ಬವನ್ನು ಆಚರಿಸುತಾರೆ.

## ಮಾರಮ್ಮನ ಹಬ್ಬ

ಶ್ರಾವಣ ಮಾಸ ಮುಗಿದ ನಂತರ ಮಾಡುವ ಹಬ್ಬ ಇದಾಗಿದೆ. ಶಕ್ತಿ ದೇವತೆಯಾದ ಮಾರಮ್ಮನಿಗೆ ಶಾಂತಿ ಮಾಡಲು ವರ್ಷಕ್ಕೆ ಒಂದುಸಾರಿಯಾದರು ಪ್ರಾಣಿ ಬಲಿ ಕೊಡುತ್ತಾರೆ. ಊರಿನ ಜನರೆಲ್ಲರು ಮನೆಗೆ ಒಂದು ಕುರಿ ಅಥವಾ ಮೇಕೆಯನ್ನು ಬಲಿಕೊಡಲು ಸಾಕಿರುತ್ತಾರೆ. ಚಿಕ್ಕ ವಯಸ್ಸಿನಲ್ಲಿ ಮಕ್ಕಳಿಗೆ ದಡಾರಮ್ಮ, ಕಾಣಿಸಿಕೊಂಡರೆ ಬೇವಿನ ಸೀರೆ ಉಡಿಸುತ್ತೇವೆಂದು ಅರಕೆ ಕಟ್ಟಿಕೊಂಡವರು ಈ ದಿನದಂದು ತಮ್ಮ ಮಕ್ಕಳಿಗೆ ಬೇವಿನ ಸೀರೆ ಉಡಿಸಿ ಮೊಸರು ಅನ್ನವನ್ನು ಎಡೆಕೊಟ್ಟು ಪ್ರಾಣಿಬಲಿ ಕೊಡುತ್ತಾರೆ.

## ಬಸವ ಜಯಂತಿ

ವೈಶಾಖ ಶುದ್ಧ ತೃತೀಯವನ್ನು ಅಕ್ಷಯ ತೃತೀಯವೆಂದು ಕರೆಯುತ್ತಾರೆ. ಈ ದಿನವನ್ನು ಸಮಸ್ತ ಸಂವತ್ಸರದ ದಿನಗಳಲ್ಲಿ ಅತೀವ ಭಾಗ್ಯದಾಯಕ ದಿನವೆಂದು ಇಲ್ಲಿನ ಸ್ಥಳೀಯರ ಅಭಿಪ್ರಾಯ ಹಾಗೂ ನಂಬಿಕೆಯಾಗಿದೆ. ಈ ದಿನವೇ ಭಕ್ತಿ ಭಂಡಾರಿ ಬಸವಣ್ಣನವರ ಜನ್ಮದಿನ. ಈ ಹಬ್ಬವನ್ನು ಭಕ್ತಿಪೂರ್ವಕವಾಗಿ ವೈಭವದಿಂದ ಬಸವ ಜಯಂತಿ ಎಂದು ಆಚರಿಸುತ್ತಾರೆ. ತಮಟಕಲ್ಲಿನ ಪರಿಸರದಲ್ಲಿ ಈ ಹಬ್ಬವನ್ನು ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ಅತ್ಯಂತ ವೈಭವದಿಂದ ಆಚರಿಸುತ್ತಾರೆ. ರೈತರು ತಮ್ಮ ಎತ್ತುಗಳನ್ನು ಸಿಂಗರಿಸಿ ಪೂಜೆ ಮಾಡುವರು.

## ಕಾರ್ತಿಕ

ಕಾರ್ತಿಕ ಹಬ್ಬದಂದು ತಮಟಕಲ್ಲು ಪರಿಸರದಲ್ಲಿ ಆಂಜನೇಯನ ದೇವಸ್ಥಾನದಲ್ಲಿ ಆಂಜನೇಯನಿಗೆ ಹೂವಿನಿಂದ ಅಲಂಕಾರ ಮಾಡಿ ದೇವಾಸ್ಥಾನದ ತುಂಬೆಲ್ಲಾ ದೀಪಗಳನ್ನು ಬೆಳಗಿಸುತ್ತಾ ದೇವಸ್ಥಾನಕ್ಕೆ ಬಂದ ಭಕ್ತರಿಗೆ ೧೦ ಪಲ್ಲ ಮಂಡಕ್ಕಿ ಫಲಹಾರವನ್ನು ಮಾಡಿ ಭಕ್ತಾದಿಗಳಿಗೆ ಹಂಚುತ್ತಾರೆ.

## ಮಕರ ಸಂಕ್ರಾಂತಿ

ಸಾಮಾನ್ಯವಾಗಿ ಸಂಕ್ರಾಂತಿ ಜನವರಿ ತಿಂಗಳಲ್ಲಿ ಬರುತ್ತದೆ. ಇದು ಪುಷ್ಯ ಮಾಸದ ಚತುರ್ಥಿಯೆಂದು ಆಚರಿಸಲ್ಪಡುತ್ತದೆ. ಇದು ಸಮೃದ್ಧಿಯ ಹಬ್ಬವಾಗಿದೆ. ಮಕರ ಸಂಕ್ರಮಣ ಎಂದರೆ ಸೂರ್ಯನು ಮಕರ ವೃತ್ತದಿಂದ ಕರ್ಕಾಟಕ ವೃತ್ತಕ್ಕೆ ಸ್ಥಾನಪಲ್ಲಟ ಮಾಡುವ ಆ ದಿನವನ್ನು ಮಕರ ಸಂಕ್ರಾತಿ ದಿನವೆಂದು ಕರೆಯುತ್ತಾರೆ. ಮಕರ ಸಂಕ್ರಾಂತಿಯಂದು ಸ್ವರ್ಗದ ಬಾಗಿಲು ತೆರೆದಿರುತ್ತದೆಂದು ಈ ಕಾಲವನ್ನು ಉತ್ತರಾಯಣ ಪುಣ್ಯಕಾಲವೆಂದು ಕರೆಯುತ್ತಾರೆ. ಆ ಸಮಯದಲ್ಲಿ ಸಾವು ಬಂದರೆ ಮುಕ್ತಿ ದೊರೆಯುತ್ತದೆಂಬ ನಂಬಿಕೆಯಿದೆ. ಮಹಾಭಾರತದಲ್ಲಿ

ಇಚ್ಛಾಮರಣಿ ಭೀಷ್ಮ ಕುರುಕ್ಷೇತ್ರದ ರಣಭೂಮಿಯಲ್ಲಿ ಮರಣ ಹೊಂದಲು ಆ ದಿನಕ್ಕಾಗಿ ಕಾದನು ಎಂಬುದಾಗಿ ಪುರಾಣಗಳಲ್ಲಿ ಉಲ್ಲೇಖವಿದೆ.

ಸಂಕ್ರಾತಿಯು ಮುಖ್ಯ ಆಚರಣೆ ಎಳ್ಳು, ಎಳ್ಳು ದಾನ ಮಾಡಿದರೆ ಪುಣ್ಯ ಪ್ರಾಪ್ತಿಯಾಗುವುದೆಂದು ನಂಬಿಕೆಯಿದೆ. ಅಂದು ದೇವರಿಗೆ ಎಳ್ಳು ಬೆಲ್ಲವೇ ನೈವೇದ್ಯ ಹೊಸಬಟ್ಟೆ ತೊಟ್ಟು ಅಲಂಕರಿಸಿಕೊಂಡ ಹೆಣ್ಣು ಮಕ್ಕಳು ಸಡಗರದಿಂದ ಮನೆ ಮನೆಗೆ ಹೋಗಿ ಎಳ್ಳು ಬೆಲ್ಲ ಬೀರುತ್ತಾರೆ. ಎಳ್ಳು ಬೆಲ್ಲ ತಿಂದು ಒಳ್ಳೆಯ ಮಾತಾಡು ಎಂಬ ಗಾದೆಯು ಈ ಹಬ್ಬದ ಸಂದರ್ಭದಲ್ಲಿ ಜನಪದರು ಹೇಳುವ ಮಾತಾಗಿದೆ. ಈ ಪರಿಸರದಲ್ಲಿ ಈ ಹಬ್ಬವು ವಿಶೇಷತೆಯನ್ನು ಪಡೆದುಕೊಂಡಿದೆ.

## ತಮ್ಮಟಗಲ್ಲು ಗ್ರಾಮದ ಜನಪದ ಸಾಹಿತ್ಯ

ಸಾಹಿತ್ಯ ಎನ್ನುವುದು ವಿಶಿಷ್ಟತೆಯಿಂದ ಕೂಡಿದೆ. ಅದರಲ್ಲಿ ಕಥೆ, ಕಾದಂಬರಿ, ನಾಟಕ, ಜನಪದ ಗೀತೆಗಳು, ಒಗಟು, ಲಾವಣಿ, ಗಾದೆ, ಕೋಲಾಟ, ಸೋಬಾನೆ ಪದ, ಗದ್ಯ ಕಥನಗಳು ಹಲವು ರೀತಿಯಲ್ಲಿ ಸಾಹಿತ್ಯವನ್ನು ಆಧಾರಿಸಿಕೊಂಡಿದೆ. ಕಲೆಗಳೊಂದಿಗೆ ಬೆರೆತಿರುವಂತಹ ಜನ ಸಾಮಾನ್ಯರು ತಮ್ಮ ವೃತ್ತಿ ಜೀವನದಲ್ಲಿ ಇವುಗಳನ್ನು ಒಂದು ಭಾಗವಾಗಿ ಮಾಡಿಕೊಂಡು ಹಬ್ಬ ಆಚರಣೆಗಳಲ್ಲಿ ಪ್ರತಿಯೊಬ್ಬರು ಸಹ ತನ್ನದೆಯಾದ ರೀತಿಯಲ್ಲಿ ನಿರ್ದಿಷ್ಟ ಮಾಧ್ಯಮ ಭಾಷೆಯನ್ನು ಬೆಳೆಸಿಕೊಂಡು ಹಲವು ರೀತಿಯ ಪದಗಳನ್ನು ಹಾಡುತ್ತಾರೆ. ಸಾಹಿತ್ಯದ ಭಾಷೆ ವ್ಯವಹಾರ ಭಾಷೆಗಿಂತ ಬೇರೆಯಾದುದ್ದು ಅದು ಭಾವ ಉಪಯೋಗ ಭಾಷೆ ಎನ್ನುತ್ತಾರೆ.

ನಾವು ಸಾಹಿತ್ಯದಲ್ಲಿ ಎರಡು ರೀತಿಯ ಭಾಷೆ ಕಾಣಬಹುದು. ಒಂದು ಚಿತ್ರ ಎರಡು ಸಂಗೀತ ಚಿತ್ರಭಾವಕ್ಕೆ ಆಕಾರ ಕೊಟ್ಟರೆ ಸಂಗೀತ ಗತಿ ನೀಡುತ್ತದೆ. ತಮ್ಮಟಗಲ್ಲು ಗ್ರಾಮದಲ್ಲಿ ಜನರು ಹಲವು ರೀತಿಯ ಹಾಡುಗಳನ್ನು ಹಬ್ಬ ಆಚರಣೆಯ ಮೂಲಕ ನೀತಿ ನಿಯಮಗಳನ್ನು ಅನುಸರಿಸುತ್ತಾ ಅವರು ಸಾಹಿತ್ಯವನ್ನು ಒಂದು ಭಾಗವಾಗಿ ಮಾಡಿಕೊಂಡಿದ್ದಾರೆ.

ಪ್ರಪಂಚದ ಎಲ್ಲಾ ಸಾಹಿತ್ಯಕ್ಕೂ ಆಯಾ ಭಾಷೆಯ ಜನಪದ ಸಾಹಿತ್ಯವೇ ಮೂಲ ಎಂಬ ಅಭಿಪ್ರಾಯವಿದೆ. ಜನಪದ ಸಾಹಿತ್ಯ ಜನ ಜೀವನದಿಂದಲೇ ಹುಟ್ಟಿರುವುದರಿಂದ ಅದನ್ನು ಜೀವನ ಕಾವ್ಯವೆಂದು ಕರೆಯಬಹುದು. ಅದು ಜೀವನದಿಂದ ಮೂಡಿದ್ದು ಜೀವನಕ್ಕೆ ಸೇರಿದ್ದು ಜೀವನಕ್ಕಾಗಿಯೇ ಬದುಕಿರುವಂತಹದ್ದು. ಅಲ್ಲಿಯ ಬದುಕು ಬೇರೆಯಲ್ಲಾ ಕಾವ್ಯ ಈ ಸಾಹಿತ್ಯವನ್ನು ಸೃಷ್ಟಿಸಿದವರು ಕಾವ್ಯ ಗ್ರಂಥಗಳನ್ನು ಓದಿದವರಲ್ಲ ಜೀವನದ ಅನುಭವವನ್ನು ತೋಡಿಕೊಳ್ಳುವುದಕ್ಕೆ ಅದರ ಒತ್ತಡವನ್ನು ಕಡಿಮೆ ಮಾಡುವುದಕ್ಕೆ ಕತೆಕಟ್ಟಿದವರು, ಆಡಿದವರು. ಈ ಹಾಡು, ಕಥೆಗಳು ಬಾಯಿಂದ ಬಾಯಿಗೆ ತಲೆಮಾರಿನಿಂದ ತಲೆಮಾರಿಗೆ ಹರಿದು ಬಂದವು.

ಜಾನಪದದಲ್ಲಿ ಬಹುಮುಖ್ಯವಾದ ಪ್ರಕಾರ ಜನಪದ ಸಾಹಿತ್ಯ. ಜಾನಪದ ಪ್ರಕಾರಗಳ ಅಧ್ಯಯನ ಪ್ರಾರಂಭವಾಗುವ ಮೊದಲೇ ಜನಪದ ಸಾಹಿತ್ಯ ಜನಪದರ ಬದುಕಿನ ಅವಿಭಾಜ್ಯ

ಅಂಗವಾಗಿ ಮನುಷ್ಯನ ಅಂತರಂಗದ ಅಭಿವ್ಯಕ್ತಿಯ ರೂಪವಾಗಿ ಜನಪದರ ಬದುಕಿನಲ್ಲಿ ಬೆಸೆದು ಬೆಳೆದುಕೊಂಡು ಬಂದಿದೆ.

ಮನುಷ್ಯನ ಹುಟ್ಟಿನಿಂದ ಅವನ ಜೊತೆಗೆ ತಾನು ಹುಟ್ಟಿ ಅವಿಭಾಜ್ಯ ಅಂಗವಾಗಿ ಬೆಳೆದುಬಂದಿರುವಂತಹದ್ದು ಜನಪದ ಸಾಹಿತ್ಯ. ಜನಪದ ಸಾಹಿತ್ಯಕ್ಕೆ ಈಗಿನ ಕನ್ನಡ ಸಾಹಿತ್ಯಕ್ಕೆ ಇರುವ ಹಾಗೆ ಬರವಣಿಗೆ ರೂಪ ಇರಲಿಲ್ಲ. ಅದು ಉಳಿದುಕೊಂಡು ಬಂದಿರುವುದು ಅನಕ್ಷರಸ್ತರ ಪರಧಿಯಲ್ಲೇ ಉಳಿದ ರಕ್ಷಣೆಗಾಗಿ ಪರಂಪರೆಯಿಂದ ಬಾಯಿಂದ ಬಾಯಿಗೆ, ಕಿವಿಯಿಂದ ಕಿವಿಗೆ, ಹರಿದು ಪರಾಕಾಷ್ಟತೆಯನ್ನು ಏರುವಂಥದ್ದು. ಜಾನಪದ ಒಂದು ಪ್ರಕಾರವಾದ ಜನಪದ ಸಾಹಿತ್ಯದ ಪ್ರಾಚೀನತೆ ಮಾನವನಷ್ಟೇ ಪ್ರಾಚೀನವಾಗಿದೆ. ಜನಪದ ಸಾಹಿತ್ಯಕ್ಕಿಂತ ಭಿನ್ನವಾಗಿ ಬೆಳೆದುಬಂದ ನಂತರದ ಸಾಹಿತ್ಯ ಆದರೆ ಶಿಷ್ಟ ಸಾಹಿತ್ಯ ಏಕಮಾತ್ರ ಸಾಹಿತ್ಯವಾಗಿ ಸಾಹಿತ್ಯ ಚರಿತ್ರೆಯನ್ನು ರೂಪಿಸಿಕೊಂಡು ಅಕ್ಷರ ಲೋಕವನ್ನು ವ್ಯಾಪಿಸಿದ ಅನೇಕ ವರ್ಷಗಳ ಬಳಿಕಜನಪದ ಸಾಹಿತ್ಯದ ಕಡೆಗೆ ಗಮನಹರಿಸಿ ಪಾಶ್ಚಾತ್ಯರ ಪ್ರೇರಣೆಯನ್ನು ಪಡೆದ ಭಾರತೀಯರು ಜನಪದ ಸಾಹಿತ್ಯದ ವಿಶ್ಲೇಷಣೆಗಳು ಮತ್ತು ಸಿದ್ಧಾಂತಗಳು, ವ್ಯಾಖ್ಯಾನಗಳು ಜನಪದ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹೊರಬಂದಿದೆ. ಜನಪದ ಸಾಹಿತ್ಯ ಕೇವಲ ಪ್ರಾದೇಶಿಕ ವೈವಿಧ್ಯವಾಗಿ ಬೆಳೆದುಬಂದಿಲ್ಲ. ಅಲ್ಲಿನ ಪರಿಸರ ಬದುಕು, ವೃತ್ತಿ, ಭಾಷೆ, ಸಂಸ್ಕೃತಿ ಮುಂತಾದವುಗಳು ಕಾರಣವಾಗಿ ವಿಶಿಷ್ಟತೆಯಿಂದ ಮೂಡಿಬಂದಿದೆ.

ಜನಪದ ಸಾಹಿತ್ಯ ಹುಟ್ಟಿರುವುದೇ ಗ್ರಾಮೀಣ ಪ್ರದೇಶದ ಕೆಳವರ್ಗದ ಸಂಸ್ಕೃತಿಯಲ್ಲಿ ಹಾಗಾಗಿ ಜನಪದ ಅಂದರೆ ಅದು ಕ್ರಿಯಾಶೀಲವಾದ ಸಂಪತ್ತು ಇದ್ದ ಹಾಗೆ. ಹಾಗಾಗಿ ಇಂದಿಗೂ ಅದು ಚಲನಶೀಲವಾದ ಕ್ರಿಯೆ ಹೊಂದಿದೆ.

### ಪ್ರೇರಣೆ

ಸಾಹಿತ್ಯ ರಚನೆಯ ಹಿನ್ನೆಲೆಯಲ್ಲಿ ತಮ್ಮಟಗಲ್ಲು ಗ್ರಾಮದ ಜನರು ಪ್ರಯತ್ನದ ನಿಟ್ಟಿನಲ್ಲಿ ಕಷ್ಟ, ಮನುಷ್ಯನಲ್ಲಿ ನೋವು ನಲಿವುಗಳನ್ನು ಆಗು ಹೋಗುಗಳನ್ನು ಇತರರೊಡನೆ ಹಂಚಿಕೊಳ್ಳಬೇಕೆಂಬ ಮೂಲ ಪ್ರೇರಣೆಯನ್ನು ಸಾಹಿತ್ಯವಾಗಿ ಬಳಸಿಕೊಂಡು ಬಂದಿದ್ದಾರೆ. ಈ ಊರಿನ ಜನರು ಜನಪದ ಸಾಹಿತ್ಯವನ್ನು ಅಂತರಂಗದ ಒತ್ತಡವನ್ನು ಅದರಿಂದ ಬಿಡುಗಡೆ ಪಡೆಯುವ ಆಶಯವು ಸಾಹಿತ್ಯ ಪ್ರೇರಣೆ ಕಂಡುಕೊಂಡಿದ್ದಾರೆ.

### ಭಜನೆ ಹಾಡುಗಳು

ತಮ್ಮಟಗಲ್ಲು ಗ್ರಾಮದಲ್ಲಿ ಆಂಜನೇಯನ ದೇವಸ್ಥಾನದಲ್ಲಿ ಪ್ರತಿ ಶನಿವಾರ ಭಜನೆ ಹಾಡುಗಳನ್ನು ಇಲ್ಲಿ ಹಾಡುತ್ತಾರೆ ಸಂಗ್ರಹಿಸಲಾಗಿದೆ.

೧. ಬ್ರಹ್ಮ ಕುಂಬಾರ ನೀನಾದೆ ಬ್ರಹ್ಮ ಮಹಾದೇವ ನೀನಾದೆ
ಇಡೀ ಬ್ರಹ್ಮಾಂಡವ ತುಂಬಿದ ಗಂಡಿಗೆ ನೀನೆ ಮಡಿದ್ದೆ ॥ಬ್ರಹ್ಮ॥
ಮಮಕಾರ ಮಣ್ಣನು ತಂದು ನಿರಾಕಾರ ನೀರನ್ನು ಎರೆದು
ನಿರಾಕಾರ ನೀರನ್ನು ಎರೆದು ಹದ ಮಾಡಿ ತುಳಿದಿದ್ದೆ ॥ಬ್ರಹ್ಮ॥
ಗುಣವೆಂಬ ಗುಟವನ್ನಿಟ್ಟು ವಿಷ್ಣು ಚಕ್ರವನ್ನಿಟ್ಟು
ಓಂಕಾರ ಕೋಲಾ ಪಿಡಿದು ಗರಗರ ತಿರುವಿದ್ದೆ ॥ಬ್ರಹ್ಮ॥
ತನುವೆಂಬ ಹಾವಿಗೆಯ ಒಳಗೆ ಗಡಿಗಡಯ ಒಡ್ಡಿದ್ದೆ
ಅಗ್ನಿಯ ಪುಟವ ಮುಚ್ಚಿ ಗಡಿಗೆ ಸುಟ್ಟಿದ್ದೆ ॥ಬ್ರಹ್ಮ॥

ನಾನಾ ತರಹದ ಗಡಿಗೆಯ ಮಾಡಿ ಇಳವಿದ್ದೆ
ಮೂನ್ನೂರ ಅರವತ್ತೈದು ಪೆಟ್ಟನ್ನು ಕೊಟ್ಟಿದ್ದೆ ॥ಬ್ರಹ್ಮ॥
ಅವರವರ ಹಣೆಬರಹವನ್ನು ಗಡಿಗಡಯಲ್ಲಿ ಬರೆದಿದ್ದೆ
ತಿರುಗಿ ಬಾರದ ಊರಿಗೆ ಗಡಿಗೆ ಕಳುವಿದ್ದೆ ॥ಬ್ರಹ್ಮ॥

ಧರೆಯೊಳು ಹುಬ್ಬಳ್ಳಿ ಗುರು ಸಿದ್ಧರೂಢರ
ಗುರು ಸಿದ್ಧರೂಢರ ಪಾದಕೊಂದಿತು ಗಡಿಗೆ ॥ಬ್ರಹ್ಮ॥
ಇಡೀ ಬ್ರಹ್ಮಾಂಡವ ತುಂಬಿದ ಗಡಿಗೆ
ನೀನೆ ಮಾಡಿದ್ದೆ ॥ಬ್ರಹ್ಮ॥

೨. ಆತ್ಮರಾಮ ಆನಂತ ರಮಣ
ಅಚ್ಚುತಾ ಕೇಶವ ಹರಿನಾರಾಯಣ
ಭವ ಭವಹರಣ ವಂದಿತ ಚರಣ ॥

ರಘುಕುಲ ಭೂಷಣ ರಾಧೆ ಗೋಪಾಲ
ಆತ್ಮರಾಮ ಆನಂತ ರಮಣ
ಅಚ್ಚುತ ಕೇಶವ ಹರಿನಾರಯಣ
ದಶರಥ ನಂದನ ಶ್ರೀರಾಮ ॥
ದಶಮುಖ ಮರ್ಧನ ರಘುರಾಮ
ಆತ್ಮರಾಮ ಆನಂತ ರಮಣ ॥

ಉಡುಪಿಯಲ್ಲಿರುವಂತಹ ಶ್ರೀಕೃಷ್ಣ ॥
ಆತ್ಮರಾಮ ಆನಂತ ರಮಣ ॥
ಕೌಸಲ್ಯರಾಮ ಶ್ರೀರಾಮ ॥
ಜಾನಕಿ ರಮಣ ಜಯ ಜಯ ರಾಮ ॥
ಆತ್ಮರಾಮ ಆನಂತ ರಮಣ

## ಸೋಬಾನೆ ಹಾಡುಗಳು

೧. ನಡಿ ನಡಿ ತಂಗೆಮ್ಮ ನಡಿಗೆಯ ನಾನೇ ನೋಡಿ
ನಡಿಗೆಯಲ್ಲಿ ಸುಂದರಿ ಗುಣಬಾರಿಸು
ನಡಿಗೆಯಲ್ಲಿ ಸುಂದರಿ ಗುಣ ಬಾರಿಸು
ನಡಿಗೆಯಲ್ಲಿ ಸುಂದರಿ ಗುಣಬಾರಿಪದಾದ ಮೇಲೆ

ಚಣಗಿದೊಳಟ್ಟಲಿ ಪದ ಬಾರಿಸು
ಚಣಗಿದೊಳಟ್ಟಲಿ ಪದ ಬಾರಿಸು
ಚಣಗಿದೊಳಟ್ಟಲಿ ಪದವಿದ್ದ ಮಗಳಿಗೆ
ಬಡವರಿಗ್ಯಾಕೆ ಕೊಡಬೇಕಿತ್ತು ॥ನಡಿ ನಡಿ॥
ನಡಿಗೆಯಲಿ ಸುಂದರಿ ಗುಣಬಾರಿಪದಾರ ಮೇಲೆ
ಕಡಲೆ ಬೆಳೆರೊಟ್ಟಿ ಹದ ಮಾಡಿಸು
ಕಡಲೆ ಬೆಳೆರೊಟ್ಟಿ ಹದ ಮಾಡಿಸು
ಕಡಲೆ ಬೆಳೆರೊಟ್ಟಿ ಹದವಿದ್ದ ಮಗಳಿಗೆ
ಬಡವರಿಗ್ಯಾಕೆ ಕೊಡಬೇಕಿತ್ತು ॥

ಅಣ್ಣ ಅಕ್ಕರ ಹಾಗೇ ದಂಡಂದೆ ಪಾಲಿಸಿ
ಹಡದಮ್ಮನ ಮನೆಗೊಂದುಡಗಿಸಬೇಕಿತ್ತು ॥
ಹಡದಮ್ಮನ ಹಡಗಿಯಚಂದ್ರಮ್ಮ
ಮಗಳ ಮೈನೆರದ ಸವಭಾಗ್ಯಸು ॥

ಸುರಿದ ನೆತ್ತಪ್ಪು ನಾನೀರಿಗೆ ಹೋಗಿದ್ದೆ
ಸುರಿದೊಡದಪ್ಪ ಒಳಗಾರಿಸು

ಸುರಿದೊಡದಪ್ಪ ಒಳಗಾರೆ ಅಹಂಕಾರ
ಸಿರಿಧಾನ್ಯಗ ಹರಸಿ ಕಳನಂದಾಸು ॥ನಡಿ ನಡಿ॥

೨. ಕಲ್ಯಾಣವೇ ಗೌರಿ ಕಲ್ಯಾಣವೇ
ಅವಳತ್ರ ಹ್ಯಾಂಗಾ ಗುಡಿಯ ಬಸವಣ್ಣನ ಮುಂದೆ
ಅವಳ ಸಾಲಿಕೆ ಬರುತ್ತಾಳೆ

ಕಲ್ಯಾಣವೇ ಗೌರಿ ಕಲ್ಯಾಣವೇ
ಕಲ್ಯಾಣವೇ ಗೌರಿ ಕಲ್ಯಾಣವೇ
ಕಲ್ಯಾಣವೇರಿ ಕಾರು ಹುಣ್ಣಿಮೆ ಪೂರ್ಣಿಮೆ
ಕಲ್ಯಾಣವಂತೆ ಶಿವನಿಗೆ
ಕಲ್ಯಾಣವೇ ಗೌರಿ ಕಲ್ಯಾಣವೇ
ಮುತ್ತು ಹರಿದಾಗೇ ಮುತ್ತು ಸಲುಹಿದಾಗೆ
ಮುತ್ತು ತ್ರಾಯಾಣ ಗುಡಿಯ ಮುಂದೆ ॥
ಕಲ್ಯಾಣವೇ ಗೌರಿ ಕಲ್ಯಾಣವೇ

ಮುತ್ತು ತ್ರಾಯಾಣ ಗುಡಿಯ ಬಸವಣ್ಣನ ಮುಂದೆ
ಮುತ್ತು ಸಾಲಿತ್ತು ಬರುತ್ತಾರೆ ॥
ಕಲ್ಯಾಣವೇ ಗೌರಿ ಕಲ್ಯಾಣವೇ
ಅಶೋಕನವ್ವ ನನ್ನ ಮಗ ನಿನ್ನ ಅಳಿಯ
ಷರತ್ತಿನಿಂದ ಏನಾ ಗೆಲ್ಲುತ್ತಾನಾ
ಕಲ್ಯಾಣವೇ ಗೌರಿ ಕಲ್ಯಾಣವೇ ॥

ಕುದುರೆ ಮೇಲೆ ಬರುವ ಚದುರನ ನೋಡಿರಾ
ಚಲುವ ಕಾಣಾವ್ವ ನನ್ನ ಮಗ
ಕಲ್ಯಾಣವೇ ಗೌರಿ ಕಲ್ಯಾಣವೇ॥

**ಜನಪದ ಕ್ರೀಡೆಗಳು**

ಜನಪದರು ಜನಪದ ಸಾಹಿತ್ಯಕ್ಕೆ ಕೊಟ್ಟಷ್ಟೇ ಮಹತ್ವವನ್ನು ಜನಪದ ಕ್ರೀಡೆಗೂ ಕೊಡುವರು. ತಮ್ಮ ದೈನಂದಿನ ದಿನವಿಡೀ ದುಡಿತದ ಮಧ್ಯವೂ ತಮ್ಮ ಬೇಸರವನ್ನು ಕಳೆದುಕೊಳ್ಳುವುದಕ್ಕಾಗಿ

ಹಾಡು, ಕುಣಿತಗಳ ಮೊರೆ ಹೋದಂತೆ ತಮ್ಮ ಬಿಡುವಿನ ವೇಳೆಯಲ್ಲಿ ಕ್ರೀಡೆಗೂ ಗಮನ ಕೊಡುತ್ತಾ ಬಂದಿದ್ದಾರೆ.

ಜನಪದ ಕ್ರೀಡೆಗಳು ನಮ್ಮ ಸಂಸ್ಕೃತಿಯ ಸಂಕೇತಗಳೆಂಬಂತೆ ಬದುಕಿನಲ್ಲಿ ಬೆರತಂಥವುಗಳು. ಅವು ಬರೀ ಆಟಗಳಾಗಿ ನಿಲ್ಲದೆ ಮನುಷ್ಯನಿಗೆ ದೈಹಿಕ ಮತ್ತು ಮಾನಸಿಕ ಸದೃಢತೆಯೊಂದಿಗೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಮಹತ್ವವನ್ನು ತಿಳಿಯಪಡಿಸುತ್ತವೆ. ಗ್ರಾಮ ಸಮಾಜ ತನ್ನದೇ ಆದ ರೀತಿಯಲ್ಲಿ ಕೃಷಿ ಪರವಾದ ಹಬ್ಬಗಳನ್ನು, ಆಚರಣೆಗಳನ್ನು, ಕ್ರೀಡೆಗಳನ್ನು ಮುಂದುವರೆಸಿಕೊಂಡು ಬಂದಿದೆ.[೬] ಜನಪದ ಆಟಗಳು ಗ್ರಾಮೀಣ ಬದುಕಿನೊಂದಿಗೆ ಬೆರೆತುಕೊಂಡಿವೆ. ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿಯೂ ನಾವು ಜನಪದ ಕ್ರೀಡೆಗಳನ್ನು ನೋಡುತ್ತೇವೆ ಇದರಿಂದ ಜನಪದರ ಕ್ರೀಡೆಯನ್ನು ಉಳಿಸಿಕೊಂಡು ಬಂದಿರುವ ಸಂಗತಿಯನ್ನು ಕಾಣುತ್ತೇವೆ. ಅಂತಹ ಪ್ರಮುಖ ಆಟದ ವಿಧಗಳನ್ನು ಈ ಕೆಳಗಿನಂತೆ ಕಾಣಬಹುದಾಗಿದೆ.

ಮರಕೋತಿ ಆಟ

ಉಪ್ಪಮ್ಮ ಉಪ್ಪಾಟ

ಮರಕೋತಿ ಆಟ

ಕುಂಟೆಬಿಲ್ಲೆ ಆಟ

ಕಣ್ಣು ಮುಚ್ಚಾಲೆ

ಕೋಲಾಟ

ಹಗ್ಗ ಜಗಿತ

ಇನ್ನು ಮುಂತಾದ ಗ್ರಾಮೀಣ ಸೊಗಡಿನ ಕ್ರೀಡೆಗಳನ್ನು ಪ್ರಸ್ತುತ ಅಧ್ಯಯನ ಕ್ಷೇತ್ರವಾದ ತಮಟಕಲ್ಲು ಪರಿಸರದಲ್ಲಿ ಜನಪದ ಕ್ರೀಡೆಗಳನ್ನು ಕಾಣಬಹುದಾಗಿದೆ. ಇದರಿಂದ ಜನಪದರ ಕ್ರೀಡೆಯನ್ನು ಉಳಿಸಿಕೊಂಡು ಬಂದಿರುವ ಸಂಗತಿಯನ್ನು ಈ ಗ್ರಾಮದಲ್ಲಿ ಕಾಣುತ್ತೇವೆ.

**ಕೊನೆಯ ಟಿಪ್ಪಣಿಗಳು**

೧. ರಮೇಶ ನಾಯಕ, ೨೦೧೫, ಯಾದಗಿರಿ ಜಿಲ್ಲೆ ಸಾಂಸ್ಕೃತಿಕ ಅಧ್ಯಯನ, ಪು.ಸಂ.೩೫೧

೨. ದೇವರಕೊಂಡಾರೆಡ್ಡಿ, ೨೦೧೮, ಇತಿಹಾಸ ದರ್ಶನ ಸಂ-೩೩, ಪು.ಸಂ. ೩೦

೩. ಹಂಪ ನಾಗರಾಜಯ್ಯ, ೨೦೦೨, ಕರ್ನಾಟಕದ ಜಾತ್ರೆಗಳು, ಪು.ಸಂ. ೧೩

೪. ಜಗನ್ನಾಥ ಹೆಬ್ಬಾಳ, ೨೦೦೨, ಜಾತ್ರಗಳು, ಪು.ಸಂ. ೨೩

೫. ಚಪ್ಪರ ಬಂಧ, ೨೦೦೬, ಬಿಜಾಪುರ ಜಿಲ್ಲೆಯ ಜಾತ್ರಾ ಉತ್ಸವಗಳು, ಪು.ಸಂ. ೩೪

೬. ತಿಪ್ಪೇರುದ್ರಸ್ವಾಮಿ.ಹೆಚ್, ೧೯೭೪, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.ಸಂ. ೧೨೬-೧೨೮

* * *

# ಅಧ್ಯಾಯ ಐದು : ಸಮಾರೋಪ

## ಅನುಬಂಧಗಳು

೧. ಪರಾಮರ್ಶನ ಗ್ರಂಥಗಳು

೨. ವಕ್ತೃವಿವರ

೩. ತಲನಕ್ಷೆ

೪. ನಕ್ಷೆಗಳು

೫. ಛಾಯಾಚಿತ್ರಗಳು

# ಅಧ್ಯಾಯ – ಐದು
## ಸಮಾರೋಪ

ಒಂದು ನಾಡಿನ ಇತಿಹಾಸ ಮತ್ತು ಸಂಸ್ಕೃತಿಯನ್ನು ಪುನಃ ರಚಿಸಲು ಆಕರ ಸಾಮಾಗ್ರಿಗಳು ಅವಶ್ಯಕ. ಈ ಅಧ್ಯಯನಕ್ಕೆ ಆಕರಗಳಿಂದ ಶಾಸನ, ಶಿಲ್ಪ, ಸ್ಮಾರಕ, ಕೋಟೆ, ಕೊತ್ತಲ, ಕೆರೆ, ಬಾವಿಗಳನ್ನು ಕ್ಷೇತ್ರಕಾರ್ಯ ಕೈಗೊಳ್ಳುವುದರ ಮೂಲಕ ಅಧ್ಯಯನ ಮಾಡಲಾಗಿದೆ. ತಮಟಕಲ್ಲು ಗ್ರಾಮವು ಪ್ರಾಗಿತಿಹಾಸಿಕ ಮಹತ್ವವನ್ನು ಹೊಂದಿದೆ. ಪ್ರಾಗಿತಿಹಾಸ ಕಾಲದಿಂದ ಇತಿಹಾಸ ರಚನೆಯ ಕಾಲದವರೆಗೂ ತನ್ನ ಚರಿತ್ರೆಯನ್ನು, ಈ ಪ್ರದೇಶದ ಪ್ರಾಚೀನ ಸಂಸ್ಕೃತಿಯ ಬೆಳವಣಿಗೆಯ ರೂಪರೇಷಗಳನ್ನು ತೋರಿಸುವುದಾಗಿದೆ.

ಇತಿಹಾಸ ಪೂರ್ವಕಾಲದಿಂದ ೨೦ನೇ ಶತಮಾನದ ಅಂಚಿನವರೆಗೆ ಇತಿಹಾಸವನ್ನು ಪುನಃ ರಚಿಸಿದ್ದನ್ನು ಕಾಣಬಹುದು. ಅನೇಕ ವೈವಿಧ್ಯಮಯ ಸಂಗತಿಗಳು, ಕಲೆ, ಮತ್ತು ವಾಸ್ತುಶಿಲ್ಪ ಸಾಂಸ್ಕೃತಿಕ ಚರಿತ್ರೆಯ ಪುನರ್ರಚನೆಗೆ ತಮ್ಮದೇ ಆದ ವಿಶಿಷ್ಟ ಕೊಡುಗೆ ನೀಡಿದ್ದು ಅಂತಹ ನಿದರ್ಶನಗಳನ್ನು ಸೋದಾಹರಣವಾಗಿ ಪ್ರಸ್ತುತ ಪಡಿಸಲಾಗಿದೆ.

ಯಾವುದೇ ಒಂದು ಪರಿಸರದ ಸ್ಥಳೀಯ ಇತಿಹಾಸವನ್ನು ತಿಳಿಯಬೇಕಾದರೆ ತಳಮಟ್ಟದ ಅಧ್ಯಯನ ಕೈಗೊಳ್ಳುವುದು ಅವಶ್ಯಕವಾಗಿದೆ. ಗ್ರಾಮ, ಹೋಬಳಿ, ತಾಲೂಕು ಹಾಗೂ ಜಿಲ್ಲೆಗಳ ಮಟ್ಟದಲ್ಲಿ ನಡೆಯುತ್ತಿರುವ ಸ್ಥಳೀಯ ಸಂಶೋಧನೆಗಳು ಇತಿಹಾಸ ಅಧ್ಯಯನದಲ್ಲಿ ಮಹತ್ತರವಾಗಿವೆ. ಸ್ಥಳೀಯ ಅಧ್ಯಯನವು ರಾಜಕೀಯ ಮತ್ತು ಸಾಂಸ್ಕೃತಿಕ ವೈವಿಧ್ಯತೆಗಳ ದಾಖಲೆ ಹಾಗೂ ಅವುಗಳ ವಿಶ್ಲೇಷಣಾತ್ಮಕ ಅಧ್ಯಯನವಾಗಿದೆ.

**"ತಮಟಕಲ್ಲು ಪರಿಸರ: ಚಾರಿತ್ರಿಕ ಅಧ್ಯಯನ"** ಎಂಬ ಶೀರ್ಷಿಕೆಯ ಪ್ರಸ್ತುತ ಪೌಢಪ್ರಬಂಧದಲ್ಲಿ ತಮಟಕಲ್ಲು ಪರಿಸರದ ಸ್ಥಳೀಯ ಇತಿಹಾಸ ಹಾಗೂ ಪ್ರಾಗೈತಿಹಾಸ ಹಾಗೂ ಸಂಸ್ಕೃತಿಯನ್ನು ಸಮಗ್ರವಾಗಿ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ.

ಚಿತ್ರದುರ್ಗ ವಿಶಿಷ್ಟ ಸಾಂಸ್ಕೃತಿಕ ಮತ್ತು ಐತಿಹಾಸಿಕ ಪರಂಪರೆಯನ್ನು ಹೊಂದಿದ ಜಿಲ್ಲೆ. ಚಿತ್ರದುರ್ಗವು ಇತರೆ ತಾಲೂಕುಗಳಿಗಿಂತ ಭೌಗೋಳಿಕವಾಗಿ ಮತ್ತು ಪ್ರಾಕೃತಿಕವಾಗಿ ವಿಭಿನ್ನವಾದದ್ದು. ಇಲ್ಲಿನ ಬೆಟ್ಟಗುಡ್ಡ, ಕಲ್ಲು, ಮರಗಿಡಗಳು ತುಂಬಾ ವಿಭಿನ್ನ ಹಾಗೂ ವೈಶಿಷ್ಟಮಯವಾದದ್ದು. ಹಾಗೂ ಇಂತಹ ಭೌಗೋಳಿಕ ಪರಿಸರದಲ್ಲಿ ಪ್ರಾಗಿತಿಹಾಸ ಕಾಲದಿಂದ ಹಿಡಿದು ಆಧುನಿಕ ಕಾಲಾವಧಿಯವರೆಗೂ ನಿರಂತರವಾಗಿ ಮಾನವನ ಸಾಂಸ್ಕೃತಿಕ ಪರಂಪರೆಯನ್ನು ಸಾಗಿಬಂದಿರುವುದು ಗಮನಾರ್ಹ ಸಂಗತಿಯಾಗಿದೆ. ಶಿಲಾಯುಗ ಕಾಲದಿಂದ ಮಾನವ ನೈಸರ್ಗಿಕ ಸಂಪತ್ತನ್ನು ವ್ಯವಸ್ಥಿತವಾಗಿ ಬಳಸಿ ಜೀವನ ಸಾಗಿದ್ದ ಎಂಬುದು ಸಾಂಸ್ಕೃತಿಕ ಅವಶೇಷಗಳು ದೃಢಪಡಿಸಿವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಜನವಸತಿಯಾಗಿತ್ತೆಂದು ಸಂಶೋಧನೆಗಳಿಂದ ಸಾಬೀತಾಗಿದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ತಮಟಕಲ್ಲು ಪ್ರದೇಶವು ಮಾನವ ಆದಿ ಕಾಲದಿಂದಲೂ ಅನೇಕ ಬದಲಾವಣೆಯೊಂದಿಗೆ ನಾಗರಿಕತೆಯತ್ತ ಸಾಗಲು ಬೆಟ್ಟ, ಗುಹೆಗಳನ್ನು ಆಶ್ರಯಿಸಿದನು ಅದರಂತೆ ಪ್ರಸ್ತುತ ಭೌಗೋಳಿಕ ಪ್ರದೇಶದಲ್ಲಿ ಅಂತಹ ಪರಿಸರವನ್ನು ಕಾಣುವುದರ ಜೊತೆಗೆ, ಹಳೆಯ ಶಿಲಾಯುಗ, ನವಶಿಲಾಯುಗ, ಹಾಗೂ ಬೃಹತ್ ಶಿಲಾಯುಗದ ಪ್ರಸಿದ್ಧ ನೆಲೆಯಾಗಿದ್ದುದು ಸ್ಪಷ್ಟವಾಗುತ್ತದೆ.

ಚಾರಿತ್ರಿಕವಾಗಿ ಹಲವು ಪ್ರಾಚೀನ ಕುರುಹುಗಳನ್ನು ಹೊಂದಿರುವ ಈ ಪರಿಸರವು ಪ್ರಾಚೀನ ಕಾಲದ ಐತಿಹಾಸಿಕ ನೆಲೆಯಾಗಿ ಹೊರಹೊಮ್ಮಿದೆ. ಈ ಪರಿಸರವು ವಿವಿಧ ಚಾರಿತ್ರಿಕ ಕಾಲಘಟ್ಟಗಳಾದ ಮೌರ್ಯ, ಶಾತವಾಹನ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ನೊಳಂಬ, ಹೊಯ್ಸಳ, ವಿಜಯನಗರ ಅರಸರು ಮತ್ತು ಚಿತ್ರದುರ್ಗ ಪಾಳೇಗಾರರು ಸೇರಿದಂತೆ ಮುಂತಾದವರ ಆಳ್ವಿಕೆಗೆ ಒಳಪಟ್ಟಿರುವುದು ಗಮನಾರ್ಹ ಸಂಗತಿ.

ಈ ಪ್ರದೇಶದ ಭೌಗೋಳಿಕ ಪರಿಸರವನ್ನು ಅರಿತು ಚಿತ್ರದುರ್ಗದ ಪಾಳೆಗಾರರ ಆಡಳಿತದ ಸಂದರ್ಭದಲ್ಲಿ ಕೋಟೆಯ ರಕ್ಷಣಾ ಕವಚವಾಗಿ ಈ ಪ್ರದೇಶಕ್ಕೆ ಮಹತ್ವವನ್ನು ನೀಡಿದರು. ತಮಟಕಲ್ಲು ಪರಿಸರದಲ್ಲಿ ಪ್ರಚಲಿತದಲ್ಲಿರುವ ಸಾಂಸ್ಕೃತಿಕ–ಧಾರ್ಮಿಕ ಆಚರಣೆಗಳು ಇಲ್ಲಿನ ಸಂಸ್ಕೃತಿ, ಜನರ ಆಚಾರ–ವಿಚಾರ ಮೊದಲಾದ ಸಾಂಸ್ಕೃತಿಕ ವಿಚಾರಗಳನ್ನು ತಿಳಿಸುತ್ತವೆ. ಇಂದಿಗೂ ಜಾತ್ರೋತ್ಸವ ಸಂದರ್ಭದಲ್ಲಿ ಶ್ರೀಸಾಮಾನ್ಯರು ಭಕ್ತಿಯ ಪ್ರತಿರೂಪವಾಗಿ ಪಾಲ್ಗೊಳ್ಳುವುದನ್ನು ಗುರುತಿಸಲಾಗಿದೆ. ಶ್ರಾವಣಮಾಸ, ಕಾರ್ತೀಕಮಾಸ ಆಚರಣೆಗಳು ಇಲ್ಲಿನ ಧಾರ್ಮಿಕ ಆಚರಣಾಂಶಗಳನ್ನು ದಾಖಲಿಸಲಾಗಿದೆ.

ತಮಟಕಲ್ಲು ಪರಿಸರದ ದೇವಾಲಯ, ಮೂರ್ತಿಶಿಲ್ಪಗಳು, ವೀರಗಲ್ಲುಗಳು ಚಾಲುಕ್ಯರು, ಹೊಯ್ಸಳ, ವಿಜಯನಗರ ಹಾಗೂ ವಿಜಯನಗರೋತ್ತರ ಕಾಲಘಟ್ಟದವು. ಸ್ಮಾರಕಶಿಲ್ಪಗಳು ಗತಕಾಲದ ಮಾನವನ ಚಾರಿತ್ರಿಕ ಅಂಶಗಳನ್ನು ಯುದ್ಧ ಮತ್ತು ವೀರತ್ವ, ದೇಶಭಕ್ತಿ, ಸಮುದಾಯಗಳ ಚರಿತ್ರೆ, ಗ್ರಾಮ ಸಂಸ್ಕೃತಿ ಮುಂತಾದ ಅಂಶಗಳನ್ನು ತಿಳಿಸಿಕೊಡುತ್ತವೆ. ಈ ತಮಟಕಲ್ಲು ಪರಿಸರದಲ್ಲಿನ ದೇವಾಲಯಗಳ ವಾಸ್ತುಶೈಲಿ ಮತ್ತು ಶಿಲ್ಪಗಳ ಕುರುಹುಗಳು ಇವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ

ಗತಕಾಲದ ಮಾನವನ ಸಾಂಸ್ಕೃತಿಕ ಬದುಕಿನ ಹಾಗೂ ವಿಭಿನ್ನ ಬದುಕಿನ ಆಯಾಮಗಳ ಕೈಗನ್ನಡಿಗಳೆನ್ನಬಹುದು.

ಶಾಸನ, ಸಾಹಿತ್ಯ, ಸ್ಮಾರಕ ಶಿಲ್ಪಗಳಿಂದ ಇತಿಹಾಸಕ್ಕೆ ಪರಿಪೂರ್ಣತೆ ದೊರೆಯುವುದಿಲ್ಲ. ಇದಕ್ಕೆ ಪೂರಕವಾಗಿ ಮೌಖಿಕ ಸಂಪ್ರದಾಯ, ನಂಬಿಕೆ ಮತ್ತು ಆಚರಣೆಗಳು ಇಂದಿಗೂ ಜೀವಂತವಾಗಿರುವ ಐತಿಹಾಸಿಕವಾದ ಕುರುಹುಗಳು. ವೀರಗಲ್ಲು ಮತ್ತು ವೀರಮಾಸ್ತಿಗಲ್ಲುಗಳು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡುಬರುವುದರಿಂದ ಇವುಗಳು ಅಂದಿನ ವೀರಪರಂಪರೆಯ ತ್ಯಾಗ-ಬಲಿದಾನದ ಸಂಕೇತವನ್ನು ತಿಳಿಸುವುದರ ಜೊತೆಗೆ ಈ ಗ್ರಾಮಕ್ಕೆ ಐತಿಹಾಸಿಕ ಮಹತ್ವ ತಿಳಿಸುತ್ತವೆ. ಈ ಬಗೆಯ ಸಾಂಸ್ಕೃತಿಕ ವಿಶೇಷತೆಗಳಿಂದ ಚರಿತ್ರೆಯ ನಿಜವಾದ ಚಿತ್ರಣ ಸಾಧ್ಯ. ಈ ಹಿನ್ನಲೆಯಲ್ಲಿ ಪ್ರಸ್ತುತ ಅಧ್ಯಯನ ಪರಿಸರದಲ್ಲಿನ ಆಂಜನೇಯ ದೇವಾಲಯ, ಈಶ್ವರ ದೇವಾಲಯ, ಉಡುಸಲಮ್ಮ ದೇವಾಲಯ, ಮುಂತಾದ ದೇವಾಲಯಗಳ ಮತ್ತು ಅವುಗಳ ಆರಾಧಕರು ಅನೂಚಾನವಾಗಿ ಅಳವಡಿಸಿಕೊಂಡು ಆಚರಿಸುತ್ತಿರುವಂತಹ ತಮಟಕಲ್ಲು ಪರಿಸರದ ಸಾಂಸ್ಕೃತಿಕ ಪರಂಪರೆಯು ವಿಶಿಷ್ಟವಾದದ್ದು.

ಒಟ್ಟಿನಲ್ಲಿ 'ತಮಟಕಲ್ಲು ಪರಿಸರದ ಚಾರಿತ್ರಿಕ ಅಧ್ಯಯನ' ಎಂಬ ಶೀರ್ಷಿಕೆಯ ಈ ಸಂಪ್ರಬಂಧದಲ್ಲಿ ಪ್ರಾಗಿತಿಹಾಸದಿಂದ ಆಧುನಿಕ ಕಾಲದವರೆಗಿನ ಮಾನವನ ಸಾಂಸ್ಕೃತಿಕ ಸಂಗತಿಗಳನ್ನು, ಸಾಹಿತ್ಯಿಕ, ಪುರಾತತ್ವೀಯ, ಚಾರಿತ್ರಿಕ, ಶಾಸನಾತ್ಮಕ ಹಾಗೂ ಮೌಖಿಕ ಆಧಾರಗಳ ಹಿನ್ನಲೆಯಲ್ಲಿ ವಿವೇಚಿಸಿ, ವಿಶ್ಲೇಷಿಸುವ ಸೂಕ್ಷ್ಮ ಅಧ್ಯಯನ ಮಾಡಲಾಗಿದೆ. ಕ್ಷೇತ್ರಕಾರ್ಯ ಆಧಾರಿತವಾದ ಈ ಅಧ್ಯಯನಕ್ಕೆ ಆಕರಗಳನ್ನು ವಸ್ತುನಿಷ್ಟವಾಗಿ ಬಳಸಿಕೊಳ್ಳುವುದರ ಮೂಲಕ ತಮಟಕಲ್ಲು ಪರಿಸರದ ಸಾಂಸ್ಕೃತಿಕ ಇತಿಹಾಸ ಸಮಗ್ರ ಅಧ್ಯಯನಕ್ಕೆ ಒತ್ತು ನೀಡಲಾಗಿದೆ. ಈ ಪ್ರದೇಶದಲ್ಲಿ ಲಭ್ಯವಾಗಿರುವ ಪ್ರಾಚ್ಯವಶೇಷಗಳು, ವಿವಿಧ ಸಂಸ್ಕೃತಿಯ ಕಾಲವನ್ನು ತಿಳಿಸಲಾಗಿದೆ. ನವಶಿಲಾಯುಗಕ್ಕೆ ಸಂಬಂಧಿಸಿದ ಕಲ್ಲಿನ ಕೊಡಲಿಯನ್ನು ನನ್ನ ಕ್ಷೇತ್ರಕಾರ್ಯದಲ್ಲಿ ಪತ್ತೆ ಹಚ್ಚಲಾಗಿದೆ. ಜೊತೆಗೆ ಈ ಪರಿಸರದಲ್ಲಿ ಪ್ರಾಚೀನ ಬಾವಿಯನ್ನು ನನ್ನ ಕ್ಷೇತ್ರಕಾರ್ಯದಲ್ಲಿ ಪತ್ತೆಹಚ್ಚಲಾಗಿದೆ. ಇದರಿಂದ ತಮಟಕಲ್ಲು ಪ್ರದೇಶವು ಪ್ರಾಗಿತಿಹಾಸದ ವ್ಯಾಪ್ತಿಯನ್ನು ವಿಸ್ತಾರಗೊಳಿಸುವಲ್ಲಿ ಹೆಚ್ಚು ಪ್ರಾಮುಖ್ಯತೆ ಪಡೆಯುವುದಾಗಿದೆ. ಜೊತೆಗೆ ಪ್ರಮುಖ ದೇವಾಲಯಗಳ ವಾಸ್ತು, ಕಾಲಮಾನ, ಪಂಥ, ಲಕ್ಷಣಗಳನ್ನು ಚರ್ಚಿಸಲಾಗಿದೆ. ಹಾಗೆಯೇ ಈ ಗ್ರಾಮವೂ ಚಿತ್ರದುರ್ಗ ಪರಿಸರದ ಪ್ರಮುಖ ಧಾರ್ಮಿಕ ಕ್ಷೇತ್ರವಾಗಿಯೂ ಕಾಣಬಹುದಾಗಿದೆ. ಛಾಯಚಿತ್ರವನ್ನು ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಿ, ತಮಟಕಲ್ಲು ಪರಿಸರದ ಸ್ಥಳೀಯ ಇತಿಹಾಸವನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿ ಸೀಮಿತವಾಗಿದ್ದರೂ ಇದರಿಂದ ಇತರೆ ಪ್ರದೇಶಗಳ ತುಲನಾತ್ಮಕ ಅಧ್ಯಯನವನ್ನು ಕೈಗೊಳ್ಳಬಹುದು ಎಂಬುದನ್ನು ಈ ಪ್ರೌಢಪ್ರಬಂಧವು ತೆರೆದಿಡುತ್ತದೆ.

## ಅನುಬಂಧಗಳು

### ೧. ಪರಾಮರ್ಶನ ಗ್ರಂಥಗಳು


ಗಿರಿಜಾ ಟಿ., ೨೦೦೧, *ದಾವಣಗೆರೆ–ಇದು ನಮ್ಮ ಜಿಲ್ಲೆ*, ನಿಹಾರಿಕಾ ಪ್ರಕಾಶನ, ದಾವಣಗೆರೆ.

ಗೋಪಾಲ ಬಾ.ರಾ., ೧೯೯೬, *ಇತಿಹಾಸ ಮತ್ತು ಸಿದ್ಧಾಂತ*, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ. ಮೈಸೂರು.

ಗೋಪಾಲ ಬಾ.ರಾ ಮತ್ತು ವೆಂಕಟಾಚಲಶಾಸ್ತ್ರಿ (ಸಂ) ೧೯೭೫, *ಸಂಶೋಧನ ಲೇಖನಗಳು*, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಗೋಪಾಲರಾವ್ ಎಚ್.ಎಸ್., ೨೦೦೧, *ಶಾಸನ ಸಂಕಲನ*, ಅಳಿಲು ಸೇವಾ ಸಂಸ್ಥೆ ಬಸವನಗುಡಿ, ಬೆಂಗಳೂರು.

ಗೋಪಾಲ್ ಆರ್., ೨೦೦೫, *ಚಿತ್ರದುರ್ಗ ಜಿಲ್ಲಾ ಇತಿಹಾಸ ಮತ್ತು ಪುರಾತತ್ವ*, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ಚಿದಾನಂದಮೂರ್ತಿ ಎಂ., ೧೯೬೬, *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಕ್ರಿ.ಶ.೪೫೦–೧೧೫೦, ಸಪ್ನಬುಕ್ ಹೌಸ್, ಬೆಂಗಳೂರು.

ಚಿದಾನಂದಮೂರ್ತಿ ಎಂ., ೧೯೮೬, *ವೀರಗಲ್ಲು ಮತ್ತು ಮಾಸ್ತಿಗಲ್ಲು*, ಐ.ಬಿ.ಎಚ್ ಪ್ರಕಾಶನ ಬೆಂಗಳೂರು.

ಚೆನ್ನಕ್ಕ ಪಾವಟೆ., ೨೦೦೩, *ಶಾಸನ ಸಂಜೀವಿನಿ*, ಚೆನ್ನಗಂಗಾ ಪ್ರಕಾಶನ, ಧಾರವಾಡ.

ದೇಸಾಯಿ ಪಿ.ಬಿ. ೧೯೬೧, *ಕನ್ನಡ ನಾಡಿನ ಶಾಸನಗಳು*, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪಾಡಿಗರ್ ಎಸ್.ವಿ., ೧೯೮೭, *ಪರಾತತ್ವ ಪರಿಚಯ*, ರಾಮಾಶ್ರಯ ಪಬ್ಲಿಕೇಶನ್ಸ್, ಧಾರವಾಡ.

ಪುಟ್ಟಣ್ಣ ಎಂ.ಎಸ್., ೧೯೯೭, *ಚಿತ್ರದುರ್ಗ ಪಾಳೆಗಾರರು*, ಕಾವ್ಯಾಲಯ ಪ್ರಕಾಶಕರು, ಜಯನಗರ, ಮೈಸೂರು.

ಪ್ರಭಾಕರ ಎಂ.ಎನ್., ೨೦೧೧, *ದೇವಾಲಯ ವಾಸ್ತು*, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಭಟ್‌ಸೂರಿ ಕೆ.ಜಿ., ೨೦೦೬, *ಕರ್ನಾಟಕ ಶಾಸನ ಸಂಶೋಧನೆ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಮಂಜುನಾಥ ಎಂ.ಜಿ., ೨೦೦೬, *ಕರ್ನಾಟಕ ಸಾಂಸ್ಕೃತಿಕ ಇತಿಹಾಸ*, ಸುಮುಖ ಪ್ರಕಾಶನ, ಬೆಂಗಳೂರು.

ಮಹಾಂತೇಶ ಎನ್.ಎಸ್., ೨೦೦೮, *ಚಿತ್ರದುರ್ಗ ಕೋಟೆ ಪರಿಸರದ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ*, ರೇಖಾ ಪ್ರಕಾಶನ, ಚಿತ್ರದುರ್ಗ.

ಮೂರ್ತಿ ಕೆ.ಎಸ್.ಎಂ., ೧೯೯೮, *ಕರ್ನಾಟಕ ಕಲೆ ಮತ್ತು ವಾಸ್ತುಶಿಲ್ಪ*, ರಂಜಿತ ಪ್ರಕಾಶನ, ತುಮಕೂರು.

ಯಶೋಧರ ರಾಜಶೇಖರಪ್ಪ., ೧೯೯೧, *ಚಿತ್ರದುರ್ಗ ಜಿಲ್ಲೆಯ ವಿಶಿಷ್ಟ ವೀರಮಾಸ್ತಿಶಿಲ್ಪ*, ಇತಿಹಾಸ ದರ್ಶನ ಸಂ,೭.

ರಮೇಶ ನಾಯಕ (ಸಂ)., ೨೦೦೭, *ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ* ಅಧ್ಯಯನಗಳ ಮರುಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ರಮೇಶ್ ಸ.ಚಿ., ೨೦೧೦, *ಕರ್ನಾಟಕ ಜನಪದ ಆಚರಣೆಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ರಂಗಸ್ವಾಮಿ ಡಿ.ಟಿ., ೨೦೦೬, *ಚಿತ್ರದುರ್ಗ ಜಿಲ್ಲಾ ದೇವಾಲಯ ದರ್ಶಿನಿ*, ಗಾಯಿತ್ರಿ ಪ್ರಕಾಶನ, ಚಿತ್ರದುರ್ಗ

ರಾಜಶೇಖರ್ ಎಸ್., ೧೯೮೮, *ಕನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ*, ಸಂಜಾತ ಪಬ್ಲಿಕೇಶನ್ಸ್, ಧಾರವಾಡ.

ರಾಮಚಂದ್ರ ರಾವ್., ಎನ್.ಕೆ. ೧೯೭೫, *ಮೂರ್ತಿಶಿಲ್ಪ–ನೆಲೆ ಹಿನ್ನಲೆ*, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ರಾಮಯ್ಯಂಗಾರ್., ೧೯೯೬, *ಪ್ರಾಚೀನ ಭಾರತದ ಹಿಂದೂ ರಾಜ್ಯಗಳು*, ಬಸವನಗುಡಿ ಬೀದಿ, ಅಡ್ಡರಸ್ತೆ, ಬೆಂಗಳೂರು.

ರಾಜಶೇಖರಪ್ಪ ಬಿ.,೨೦೦೧, *ದುರ್ಗಶೋಧನೆ*, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ರಾಜಶೇಖರಪ್ಪ ಬಿ.,೨೦೦೧, *ಇತಿಹಾಸ ಕಥನ*, ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು.

ರಾಮದಾಸರೆಡ್ಡಿ ಎನ್.ಜಿ., ೨೦೦೬, *ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚರಿತ್ರಿಕ ಅಧ್ಯಯನ*, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ಲಕ್ಷ್ಮಣ್ ತೆಲಗಾವಿ., ೧೯೮೭, *ಹರಿತಿಸಿರಿ*, ಅಶ್ವತ್ ಪ್ರಿಂಟರ್ಸ್, ಬೆಂಗಳೂರು.

ಲಕ್ಷ್ಮಣ್ ತೆಲಗಾವಿಸ(ಸಂ)., ೨೦೦೧, *ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಲಕ್ಷ್ಮಣ್ ತೆಲಗಾವಿ., ೨೦೦೪, *ಮೌರ್ಯ ಮತ್ತು ಶಾತವಾಹನ ಯುಗ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಲಕ್ಷ್ಮಣ್ ತೆಲಗಾವಿ., ೨೦೧೮, *ತಮಟಕಲ್ಲು: ಚಿತ್ರದುರ್ಗ ಪರಿಸರದ ಪ್ರಾಗೈತಿಹಾಸಿಕ ನೆಲೆ*, ಇತಿಹಾಸ ಸಂಪುಟ–೩೩, ೨೬–೩೩.

ವಿರೂಪಾಕ್ಷ ಪೂಜಾರಹಳ್ಳಿ., ೨೦೦೨, *ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ವೆಂಕಟರತ್ನ ಎ.ಬಿ. ಮತ್ತು ಪದ್ಮ ಎಂ.ಬಿ., ೧೯೯೧, *ಇತಿಹಾಸ ಸಂಶೋಧನ ಮಾರ್ಗ*,

ಪ್ರಿಂಟಿಂಗ್ ಪಬ್ಲಿಷಿಂಗ್ ಕಂಪನಿ, ಲಿಮಿಟೆಡ್, ಬೆಂಗಳೂರು.

ಷೇಕ್ ಅಲಿ ಬಿ ಮತ್ತು ಇತರರು., ೧೯೭೬, *ಇತಿಹಾಸ ಪರಿಚಯ ಭಾಗ-೨,* (ಭಾರತೀಯ ಸಂಸ್ಕೃತಿಯ ರೂಪರೇಷೆಗಳು) ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಶಕುಂತಲಾ ಎಸ್., ೨೦೧೧, *ಚಿತ್ರದುರ್ಗ ಪಾಳೇಯಗಾರರ ಕಾಲದ ಕಲೆ ಮತ್ತು ವಾಸ್ತುಶಿಲ್ಪ ಒಂದು ಅಧ್ಯಯನ,* ಸಿವಿಜಿ ಪ್ರಕಾಶನ ಕಸ್ತೂರಿಬಾ ಭವನ, ಬೆಂಗಳೂರು.

ಶಿವರಾಮ ಕಾರಂತ., ೧೯೭೫, *ಭಾರತೀಯ ಶಿಲ್ಪ,* ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಶಿವತಾರಕ್ ಕೆ.ಬಿ., ೨೦೦೧, *ಕರ್ನಾಟಕ ಪುರಾತತ್ವ ನೆಲೆಗಳು,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಶಿರೂರು ಬಿ.ವಿ., ೨೦೦೮, *ಸಂಶೋಧನೆಯ ಸ್ವರೂಪ,* ಅನ್ನಪೂರ್ಣ ಪ್ರಕಾಶನ ಹುಬ್ಬಳ್ಳಿ.

ಶೇಷಶಾಸ್ತ್ರಿ ಆರ್., ೧೯೮೨, *ಕರ್ನಾಟಕದ ವೀರಗಲ್ಲುಗಳು,* ಕನ್ನಡ ಸಾಹಿತ್ಯ ಪರಿಷತ್ ಚಾಮರಾಜಪೇಟೆ ಬೆಂಗಳೂರು.

ಶೇಷಶಾಸ್ತ್ರಿ ಆರ್., ೧೯೮೨, *ಶಾಸನ ಪರಿಚಯ,* ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಶ್ರೀನಿವಾಸ ಪಾಡಿಗಾರ., ೧೯೮೨, *ಪುರಾತತ್ವ ಪರಿಚಯ,* ಗಾಯಿತ್ರಿ ಪ್ರಕಾಶನ ಧಾರವಾಡ.

ಶ್ಯಾಮಲ ಸಿ.ಆರ್., ೨೦೦೮, *ಪೂರ್ವ ಕರ್ನಾಟಕದ ಪಾಳೆಗಾರರ ಒಂದು ಅಧ್ಯಯನ,* ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ಸದಾಶಿವಪ್ಪ ಕುಂಬಾ., ೧೯೯೦, *ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ,* ಮಾಲತೇಶ ಪ್ರಕಾಶನ, ಕುಂಟೂರು.

ಸದಾಶಿವಪ್ಪ ಕುಂಬಾ., ೧೯೯೨, *ಹರಪ್ಪನಹಳ್ಳಿ ಪಾಳೆಯಗಾರರು,* ಮಾಲತೇಶ ಪ್ರಕಾಶನ, ಹರಪ್ಪನಹಳ್ಳಿ.

ಸಿ.ಪಿ.ಕೆ.೨೦೦೧., *ಶಾಸನಶಾಸ್ತ್ರ ಪ್ರವೇಶ,* ಚೇತನ ಬುಕ್‌ಹೌಸ್, ಮೈಸೂರು.

ಸುರೇಶ ಬಿ., ೨೦೦೬, *ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಯ ದೇವಾಲಯಗಳು,* ಸಂಶೋಧನ ಪ್ರಕಾಶನ, ಬಾಲೆನಹಳ್ಳಿ, ಚಳ್ಳಕೆರೆ.

ಸೂರ್ಯನಾಥ ಕಾಮತ್., ೨೦೦೮, *ಕರ್ನಾಟಕ ಸಂಕ್ಷಿಪ್ತ ಇತಿಹಾಸ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಸೋಮಶೇಖರ್ ಎಸ್.ವೈ., ೨೦೧೦, *ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ-೪,* ಜಗಲೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಸೋಮಶೇಖರ್ ಎಸ್.ವೈ., ೨೦೧೭, *ಕರ್ನಾಟಕ ದೇವಾಲಯ ಕೋಶ,* ಚಿತ್ರದುರ್ಗ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

**ಗ್ಯಾಸೆಟಿಯರ್‌ಗಳು**

ಎಪಿಗ್ರಾಫಿಯ ಕರ್ನಾಟಕ ಸಂಪುಟ-೧೧

ಸೂರ್ಯನಾಥ ಕಾಮತ್ (ಸಂ) ೧೯೮೪, ಕರ್ನಾಟಕ ರಾಜ್ಯ ಗ್ಯಾಸಟಿಯರ್, ಭಾಗ-೧, ಕರ್ನಾಟಕ ಸರ್ಕಾರ, ಬೆಂಗಳೂರು.

ಸೂರ್ಯನಾಥ ಕಾಮತ್ (ಸಂ) ೧೯೮೬, ಕರ್ನಾಟಕ ರಾಜ್ಯ ಗ್ಯಾಸಟಿಯರ್, ಭಾಗ-೨, ಕರ್ನಾಟಕ ಸರ್ಕಾರ, ಬೆಂಗಳೂರು.

**ಪಿಹೆಚ್.ಡಿ. ಅಪ್ರಕಟಿತ ಮಹಾಪ್ರಬಂಧಗಳು**

ಜಯಮ್ಮ ಹೆಚ್., ೨೦೦೨, ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಪಿಹಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ತಿಪ್ಪೇಸ್ವಾಮಿ ಎಸ್., ೨೦೦೬, ರಕ್ಷಣಾ ವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ, ಅಪ್ರಕಟಿತ ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಚಾರುಲತಾ ಬಿ.ಟಿ., ೨೦೧೪-೧೫, ಬ್ರಹ್ಮಗಿರಿ : ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಶರತ್ ಬಾಬು ಕೆ. ಎಸ್., ೨೦೧೭-೧೮, ಚಿತ್ರದುರ್ಗ ಜಿಲ್ಲಾ ಪರಿಸರದ ಪ್ರಾಗಿತಿಹಾಸ, ಅಪ್ರಕಟಿತ ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಎಂ.ಫಿಲ್. ಪ್ರೌಢ ಪ್ರಬಂಧಗಳು

ಕಾಂತರಾಜ್ ಹೆಚ್., ೨೦೧೩, ಐಮಂಗಲ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಜಗದೀಶ ಡಿ., ೨೦೧೬, ಹಿರಿಯೂರು ಪಟ್ಟಣದ ಚಾರಿತ್ರಿಕ ಅಧ್ಯಯನ, ಅಪ್ರಕಟಿತ ಎಂ.ಫಿಲ್.ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ನಾಗರಾಜಪ್ಪ ಎಸ್., ೨೦೦೮, ಚಿತ್ರದುರ್ಗ ಪರಿಸರದ ದೇವಾಲಯಗಳು, ಅಪ್ರಕಟಿತ ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಮಾರುತಿ ಹೆಚ್., ೨೦೧೮. ಕಲ್ಲೇದೇವರಪುರದ ಪರಿಸರದ ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಎಂ.ಫಿಲ್. ಪ್ರಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ.

ವಿಶ್ವನಾಥ್ ಪಿ., ೨೦೦೬, ಚಿತ್ರದುರ್ಗ ಪ್ರದೇಶದ ಪ್ರಾಗೈತಿಹಾಸಿಕ ಚಿತ್ರಗಳು, ಅಪ್ರಕಟಿತ ಎಂ.ಫಿಲ್. ಪ್ರಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ.

ಯೋಗೇಶ್ ವೈ., ೨೦೦೮, ಚಿತ್ರದುರ್ಗ ಜಿಲ್ಲೆಯ ಚಿತ್ರಕಲೆ, ಅಪ್ರಕಟಿತ, ಎಂ.ಫಿಲ್. ಪ್ರಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ,.

೨. ವಕ್ತೃ ವಿವರ

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಸ್ಥಳ |
|---|---|---|---|---|
| ೧. | ಹನುಮಂತಪ್ಪ | ೬೫ | ಪೂಜಾರಿ | ತಮಟಕಲ್ಲು |
| ೨. | ಮಂಜುನಾಥ | ೪೫ | ಕಲಾವಿದರು | ತಮಟಕಲ್ಲು |
| ೩. | ಹನುಮಂತಪ್ಪ | ೫೦ | ಪ್ರಥಮ ದರ್ಜೆ ಸಹಾಯಕರು | ತಮಟಕಲ್ಲು |
| ೪. | ಶಿವಮೂರ್ತಿ | ೪೫ | ಹೋಟೆಲ್ ಮಾಲಿಕರು | ತಮಟಕಲ್ಲು |
| ೫. | ಕರಿಬಸಣ್ಣ | ೫೫ | ವ್ಯವಸಾಯ | ತಮಟಕಲ್ಲು |
| ೬. | ಕರಿಯಪ್ಪ | ೫೫ | ಗ್ರಾ.ಪಂ. ಸದಸ್ಯರು | ತಮಟಕಲ್ಲು |
| ೭. | ಗಿರೀಶ | ೪೫ | ಮುಖ್ಯೋಪಾಧ್ಯಾಯರು | ತಮಟಕಲ್ಲು |
| ೮. | ತಿಪ್ಪೇರುದ್ರಪ್ಪ | ೫೫ | ವ್ಯವಸಾಯ | ತಮಟಕಲ್ಲು |
| ೯. | ಮಾರುತಿ | ೩೫ | ವ್ಯವಸಾಯ | ತಮಟಕಲ್ಲು |
| ೧೦. | ಸಣ್ಣ ಹನುಮಂತಪ್ಪ | ೬೦ | ಗ್ರಾ.ಪಂ. ಸದಸ್ಯರು | ತಮಟಕಲ್ಲು |

೩. ತಲನಕ್ಷೆ



ಆಂಜನೇಯ ದೇವಾಲಯದ ತಲನಕ್ಷೆ, ತಮಟಕಲ್ಲು

೪. ನಕ್ಷೆಗಳು

## ಕರ್ನಾಟಕ ರಾಜ್ಯ




ಕೃಪೆ : ಅಂತರ್ಜಾಲ

ಚಿತ್ರದುರ್ಗ ಜಿಲ್ಲೆ




ಕೃಪೆ : ಅಂತರ್ಜಾಲ

೫. ಛಾಯಾಚಿತ್ರಗಳು



ಕ್ಷೇತ್ರಕಾರ್ಯದಲ್ಲಿ ದೊರೆತ ಪ್ರಾಚ್ಯಾವಶೇಷಗಳು, ತಮಟಕಲ್ಲು



ಕ್ಷೇತ್ರಕಾರ್ಯದಲ್ಲಿ ಶೋಧಿಸಿದ ನವಶಿಲಾಯುಗದ ಕೈಕೊಡಲಿ, ತಮಟಕಲ್ಲು



ಶ್ರೀ ಆಂಜನೇಯಸ್ವಾಮಿ ದೇವಸ್ಥಾನ



ಕಾರ್ಯಪ್ರಗತಿಯಲ್ಲಿರುವ
ಆಂಜನೇಯ ದೇವಸ್ಥಾನದ
ಮಹಾದ್ವಾರ, ತಮಟಕಲ್ಲು



ಗ್ರಾಮದೇವತೆ ಉಡಸಲಮ್ಮ
ದೇವಸ್ಥಾನ, ತಮಟಕಲ್ಲು

ಈಶ್ವರ ದೇವಸ್ಥಾನ, ತಮಟಕಲ್ಲು





ರಂಗನಾಥಸ್ವಾಮಿ ಬೆಟ್ಟದ
ಮುಂಭಾಗದಲ್ಲಿರುವ ಬಂಡೆಗಲ್ಲುಗಳು
(ಒಳಭಾಗದಲ್ಲಿ ದೇವಸ್ಥಾನವಿದೆ)



ಗರ್ಭಗೃಹದಲ್ಲಿರುವ ಆಂಜನೇಯ ಮೂರ್ತಿಶಿಲ್ಪ, ತಮಟಕಲ್ಲು



ಹೆಡೆಕಲ್ಲು ಬೆಟ್ಟದ ಮೇಲಿರುವ ನಂದಿ ವಿಗ್ರಹ



ತೃಟಿತ ನಂದಿವಿಗ್ರಹ,

ತಮಟಕಲ್ಲು



ಗ್ರಾಮದೇವತೆ ಉಡಸಲಮ್ಮದೇವಿ,

ತಮಟಕಲ್ಲು



ತಮಟಕಲ್ಲು ಪರಿಸರದಲ್ಲಿ
ದೊರೆತ ವೀರಗಲ್ಲು



ತಮಟಕಲ್ಲು ಪರಿಸರದಲ್ಲಿ
ದೊರೆತ ಶಾಸನ



ವೀರಮಾಸ್ತಿಗಲ್ಲು, ತಮಟಕಲ್ಲು



ಪ್ರಾಚೀನ ಬಾವಿ, ತಮಟಕಲ್ಲು





ರಂಗನಾಥಸ್ವಾಮಿ ಬೆಟ್ಟದ ಮುಂಭಾಗದಲ್ಲಿರುವ ಬಂಡೆ ಬರಹಗಳು







ರಂಗನಾಥಸ್ವಾಮಿ ಬೆಟ್ಟದ ಮುಂಭಾಗದ ಬಂಡೆಗಳ ಮೇಲಿರುವ ತಂತ್ರ ಸಂಬಂಧಿ ಸಂಕೇತಗಳು



ಹೆಡೆಕಲ್ಲು ಬೆಟ್ಟದ ತುದಿಯಿಂದ ತಮಟಕಲ್ಲು ಗ್ರಾಮದ ವ್ಯೋಮ ನೋಟ

